# ಕೊಡಗು  ಸಂಗಾತಿ

ಸಂಪಾದಕಿ : ಪಟ್ಟಡ ಶೀಲಾಮಣಿ

ಕನ್ನಡ ಮತ್ತು ಗೌಡ ಕನ್ನಡದ ಏಕೈಕ ಪಾಕ್ಷಿಕ ಪತ್ರಿಕೆ

K.R.N.N. 240 ಸಂಪುಟ : 1 ಸಂಚಿಕೆ : 6 ಜೂನ್ 15 ರಿಂದ 30–1997 ಪುಟಗಳು : 24 ರೂ. 5



ಕಿವಿಯಲ್ಲಿ ಕಡಕ್ ಮತ್ತು ತಲೆಯಲ್ಲಿ ಚೆಕ್ ವಸ್ತ್ರವನ್ನು
ಧರಿಸಿರುವ ನಮ್ಮ ಹಿಂದಿನ ಸಂಪ್ರದಾಯಸ್ಥರು

ನನ್ನ ಸ್ನೇಹಿತನ ಮುದ್ದಿನ ಕಣ್ಮಣಿ
ಕೊಡಗು ಸಂಗಾತಿಗೆ ಶುಭಾಶಯಗಳು...

ಬೊಳ್ಯಂಡ ಸೋಮಯ್ಯ ಮಾದಪ್ಪ
(ಹೊರನಾಡು ಗ್ರಾಮ)
ಬಿ.ಇ.ಎಂ.ಎಲ್., ಆಫೀಸರ್ಸ್ ಕ್ಲಬ್,
ಜಯಲಕ್ಷ್ಮಿಪುರಂ, ಮೈಸೂರು-12.

ಮತ್ತು

ಬೊಳ್ಯಂಡ ಸ್ವಾತಿ ಮಾದಪ್ಪ ಹಾಗೂ
ಬೊಳ್ಯಂಡ ಮಾದಪ್ಪ ಮೇದಪ್ಪ

ವಿಳಾಸ :
279, 15ನೇ ಕ್ರಾಸ್, 'ಎನ್' ಬ್ಲಾಕ್,
ಕುವೆಂಪುನಗರ, ಮೈಸೂರು-570 023
ಫೋನ್ - ಮನೆ : 60020, ಕಛೇರಿ : 510825.

ಕೊಡಗು ಸಂಗಾತಿ ಪತ್ರಿಕೆ
ಚಿರಾಯುವಾಗಲಿ....

ನೀವು ದೇವರು ಮೆಚ್ಚುವಂತಹ ಕೆಲಸ
ಮಾಡಿದ್ದೀರಿ ನಿಮಗೆ ಶುಭವಾಗಲಿ
ಎಂದು ಹಾರೈಸುವ,



ಯಿಂದ :
ಕುಯ್ಯಮುಡಿ ಗೋಪಾಲ ಅಶ್ವಿನಿಕುಮಾರಿ
ಸ್ಟಾಫ್ ನರ್ಸ್, ಬಸಪ್ಪ ಮೆಮೋರಿಯಲ್ ಹಾಸ್ಪಿಟಲ್
ಮೈ ಸೂ ರು – 5 7 0 0 1 2.

## ಧನ್ಯವಾದಗಳು....

ಕುಂಚಡ್ಕ ಸೋಮಪ್ಪ ಉಲ್ಲಾಸ್, (ಅಸಿಸ್ಟೆಂಟ್ ಕಮಿಷನರ್ ಆಫ್ ಪೋಲಿಸ್) ಬೆಂಗಳೂರು ನಗರ ಉದ್ಯೋಗಿಯಾಗಿದ್ದು "ಕೊಡಗು ಸಂಗಾತಿ" ಯ ಜೀವಾವಧಿ ಸದಸ್ಯತ್ವಕ್ಕೆ 1000 ರೂ. ಕೊಟ್ಟು ಪತ್ರಿಕೆಯ ಬೆಳವಣಿಗೆಗೆ ಸಹಕರಿಸಿದ್ದಾರೆ. ಇವರಿಗೆ "ಸಂಗಾತಿ" ಬಳಗದ ಧನ್ಯವಾದಗಳು.

## ನಿರೀಕ್ಷಿಸಿ !!

ಅರೆಭಾಷಿಕ ಜನಾಂಗದ ಮದುವೆ ಇನ್ನಿತರ ಸಮಾರಂಭಗಳಲ್ಲಿ ಅನುಸರಿಸಿಕೊಂಡು ಬರುತ್ತಿರುವ ಸಂಪ್ರದಾಯ–ಪದ್ಧತಿ, ಆಚಾರ-ವಿಚಾರಗಳ ಬಗೆಗಿನ ಮಾಹಿತಿಗಳನ್ನು ಕಂತುಗಳ ರೂಪದಲ್ಲಿ ಪ್ರಕಟಿಸಲಾಗುವುದು. ಓದುಗರು ಇದರ ಪ್ರತಿಫಲ ಪಡೆಯಲು ಪ್ರತಿಗಾಗಿ ನಿರೀಕ್ಷಿಸಿ !!

# ಕೊಡಗು ಸಂಗಾತಿ

ಸಂಪಾದಕಿ, ಪ್ರಕಾಶಕಿ :
**ಪಟ್ಟೆಡ ಪಿ. ಶೀಲಾವಣಿ**

ಉಪ ಸಂಪಾದಕ :
**ಕಟ್ರತನ ಸಿ. ಜಯರಾಂ**

ಸಹ ಸಂಪಾದಕ :
**ಹುಲಿವನೆ ಓ. ರವೇಶ್**

ಪ್ರಸಾರ ವ್ಯವಸ್ಥಾಪಕ :
**ಪಟ್ಟೆಡ ಎಲ್. ಶಿವಕುಮಾರ್**

ಕಛೇರಿ ನಿರ್ವಹಣೆ :
**ಪಟ್ಟೆಡ ಪಿ. ದೀಪಕ್**
**ಹೊಸೊಕ್ಲು ಹರಿಣಿ ಬೆಳ್ಯಪ್ಪ**

ಮುದ್ರಣ :
**ಮುಂಡ್ಯಂಡ್ರ .ಕೆ. ತಮ್ಮಯ್ಯ**
**ಆಶೀರ್ವಾದ್ ಪ್ರಿಂಟರ್ಸ್,**
ವಿನಾಯಕನಗರ, ಮೈಸೂರು-12

ಗೌರವ ವ್ಯವಸ್ಥಾಪಕ :
**ಪಟ್ಟೆಡ ಎಂ. ಪ್ರಭಾಕರ್**

ಜಾಹೀರಾತು ಪ್ರಸಾರ ಕಛೇರಿ :

**ಕೊಡಗು ಸಂಗಾತಿ**

ನಂ. 322, ಭೋಗಾದಿ ಸರ್ಕಲ್,
ಹಿನಕಲ್ ಪೋಸ್ಟ್, ಮೈಸೂರು–17

## ಒಳನೋಟ

ಪುಟಗಳು



### ಅರೆ ಭಾಷಿಕ ವಿಭಾಗ



### ಚಂದಾ ವಿವರ

| | | |
|---|---|---|
| ಬಿಡಿ ಪ್ರತಿ | : | 5 ರೂ. |
| ಅರ್ಧ ವಾರ್ಷಿಕ | : | 60 ರೂ. |
| ವಾರ್ಷಿಕ ಚಂದಾ | : | 120 ರೂ. |

## ಸಂಪಾದಕೀಯ :-

ಇತ್ತೀಚಿನ ಪೀಳಿಗೆಗೆ ಸ್ವಾತಂತ್ರ್ಯ ಹೋರಾಟಗಾರರನ್ನು ಮಾತ್ರ ನೆನಪಿಸಿಕೊಂಡು ಅವರ ಹೋರಾಟ, ಸಾಹಸಗಳನ್ನು ಭಾಷಣಗಳ ಮೂಲಕ ಮಾಧ್ಯಮಗಳ ಮೂಲಕ ತಿಳಿಯಪಡಿಸುವುದನ್ನು ಕಾಣಬಹುದು. ಶತ ಶತಮಾನಗಳ ಹಿಂದೆ ರಾಜಮಹಾರಾಜರು ಆಳಿದಳಿದು ಹೋದಾಗ, ಅವರ ಆಳ್ವಿಕೆಗೆ ಸಮನಾಗಿ ಪಾಳೇಗಾರಿಕೆಯು ಸಹ ಒಂದು ಬಲಿಷ್ಠ ಆಳ್ವಿಕೆಯನ್ನು ಕೊಡುತಿತ್ತು.

ಇಲ್ಲಿ ಇವನ್ನೆಲ್ಲ ಏಕೆ ಹೇಳುತ್ತಿದ್ದೇವೆ ಅಂದರೆ ನಮ್ಮ ಜನಾಂಗದ ಪೂರ್ವಜರು ಪಾಳೇಗಾರಿಕೆಯಲ್ಲಿ ಮೆರೆದು ಇತಿಹಾಸದಲ್ಲಿ ಸ್ಥಿರವಾಗಿ ಉಳಿಯಬಲ್ಲವರಂತವರಲ್ಲಿ ಒಂದು ಸಂತತಿಯ ಪರಿಚಯವನ್ನು ತಿಳಿಯಪಡಿಸುತ್ತಿದ್ದೇವೆ. ಕ್ರಿ.ಶ. 1300ರ ಸುಮಾರಿಗೆ ಕೊಡಗಿನ ತಾವುನಾಡು (ಭಾಗಮಂಡಲ) ಬೇಂಗ್‌ನಾಡ್, ಕುಯ್ಯಂಗೇರಿ ನಾಡುಗಳಲ್ಲಿ ಪಾಳೇಗಾರಿಕೆಯ ಭದ್ರ ತಳಪಾಯ ಹಾಕಿ ಇತಿಹಾಸದ ಪುಟಗಳಲ್ಲಿ ಅಡಗಿರುವ ವೀರಾಧಿವೀರ ಕರ್ಣಂಬು ಬಾಹುವು ಒಬ್ಬ ಮಹಾನ್ ವ್ಯಕ್ತಿಯೆಂಬುದು ಚರಿತ್ರೆಯಿಂದ ತಿಳಿದು ಬರುತ್ತದೆ.

ಇವರ ಚರಿತ್ರೆಯನ್ನು ಅಧ್ಯಯನ ಮಾಡಿದಾಗ ಕೊಡಗಿನಲ್ಲಿರುವ ಕರ್ಣಯ್ಯನ ಮನೆತನಕ್ಕೆ ಹೋಲುವಂತಿದೆ. ಈ ವೀರಾಧಿವೀರ ಕರ್ಣಂಬು ಬಾಹುವಿನ ಸಂತತಿಯ ನಾಮ ಕ್ಷೀಣಿಸುತ್ತಾ ಬಂದು ಕರ್ಣಯ್ಯನ ಮಣು ಮನೆಸ್ಥಾನ ಎಂಬುದಾಗಿರುವ ಸಾಧ್ಯತೆಗಳು ಕಂಡುಬರುತ್ತಿದೆ. ಈ ನಿಟ್ಟಿನಲ್ಲಿ ಇಂತಹ ಪಾಳೇಗಾರಿಕೆಯ ಬಗ್ಗೆ ನಮ್ಮ ಯುವ ಪೀಳಿಗೆ ಅಧ್ಯಯನ ಮಾಡಿ ಪುಸ್ತಕದ ರೂಪದಲ್ಲಿ ಹೊರತಂದಾಗ ನಮ್ಮ ಜನಾಂಗದ ಇತಿಹಾಸದ ಬೇರುಗಳು ಇನ್ನೂ ಬಲಗೊಳ್ಳುವುದರಲ್ಲಿ ಸಂಶಯವಿಲ್ಲ.

## ಜನ್ಮ ದಿನಾಂಕ ಮತ್ತು ತಿಂಗಳನ್ನು ಊಹಿಸುವುದು ಹೇಗೆ ?

ನೀವು ಯಾವುದಾದರೂ ವ್ಯಕ್ತಿಯ ಜನ್ಮ ದಿನಾಂಕ, ತಿಂಗಳನ್ನು ಊಹಿಸಿ ಅವನ್ನು ಸರಿಯಾಗಿ ಅವರಿಗೆ ಹೇಳಲು ಈ ರೀತಿಯನ್ನು ಅನುಸರಿಸಿರಿ.

ಮೊದಲು ಅವರಿಗೆ ಎರಡು ಅಂಕೆಗಳನ್ನು ಅವರ ಮನದಲ್ಲಿರಿಸಿಕೊಳ್ಳಲು ಹೇಳಿ. ಅದು ಯಾವುದೆಂದರೆ ಅವರು ಜನ್ಮನೆತ್ತಿದ ತಿಂಗಳಿನ ಅಂಕೆ ಮತ್ತು ಅದೇ ತಿಂಗಳಿನ ಅವರ ಜನ್ಮ ದಿನಾಂಕದ ದಿನದ ಅಂಕೆಯನ್ನು ವಾಡಿಕೆಯಂತೆ ಜನವರಿಯಿಂದ ಮೊದಲ್ಗೊಂಡು 1 ರಿಂದ 12 ಎಂದು ಕೊಡಬೇಕು. ನಂತರ ಅವರಿಗೆ ಈ ಕೆಳಗಿನಂತೆ ಮಾಡಲು ನಿರ್ದೇಶಿಸಬೇಕು.

ಮೊದಲು ಅವರ ಜನ್ಮತಳೆದ ತಿಂಗಳಿನ ಸಂಖ್ಯೆಗೆ 5ರಿಂದ ಗುಣಿಸಲು ಹೇಳಿ. ನಂತರ ಗುಣಾಕಾರದಿಂದ ಲಬ್ಧವಾದ ಸಂಖ್ಯೆಗೆ 6ನ್ನು ಕೂಡಿಸಲು ಹೇಳಿ ಅದರಿಂದ ಲಬ್ಧವಾದ ಸಂಖ್ಯೆಗೆ 4ರಿಂದ ಗುಣಿಸಲು ಹೇಳಿ ಬಂದ ಸಂಖ್ಯೆಗೆ 9ಅಂಕೆಯನ್ನು ಕೂಡಿಸಲು ಹೇಳಿ. ಉಪಲಬ್ಧ ಆ ಸಂಖ್ಯೆಗೆ ಮತ್ತೆ 5 ರಿಂದ ಗುಣಿಸಲು ಹೇಳಿ. ಬಳಿಕ ಅವರ ಜನ್ಮದಿನಾಂಕದ ಸಂಖ್ಯೆಯನ್ನು ಉಪಲಬ್ಧ ಸಂಖ್ಯೆಗೆ ಕೂಡಿಸಲು ಹೇಳಿ. ಈ ಎಲ್ಲ ಲೆಕ್ಕಾಚಾರಗಳನ್ನು ಮಾಡಲು ಅವರಿಗೆ ಸಮಯ ಕೊಡಿ. ಅವರ ಲೆಕ್ಕ ಮುಗಿದೊಡನೆ ಅವರ ಕೊನೆಯ ಸಂಖ್ಯೆ ಯಾವುದೆಂದು ಕೇಳಿ. ಈಗ ಆ ಸಂಖ್ಯೆಯಲ್ಲಿ ನೀವು ಮೌನರೀತಿಯಿಂದ 165 ಕಳೆಯಿರಿ. ನೀವು 165ನ್ನು ಕಳೆದಾಗ ಬರುವ ಸಂಖ್ಯೆಯ ಕೊನೆಯ ಎರಡು ಅಂಕೆಗಳು ನಿಮಗೆ ಅವರ ಜನ್ಮ ದಿನಾಂಕವನ್ನು ಉಳಿದ ಅಂಕಿಗಳು ಅವರ ಜನ್ಮ ತಿಂಗಳನ್ನೂ ತಿಳಿಸುತ್ತವೆ.

ಬೇರೆ ಒಂದು ಲೆಕ್ಕದ ವಿವರ(ವ್ಯಕ್ತಿಯ ಜನ್ಮ ದಿನಾಂಕ 27 ಮಾರ್ಚ್ ಎಂದು ತಿಳಿಯುವಾ)

ಜನ್ಮ ದಿನಾಂಕ 27 ಮಾರ್ಚ್ (ಕಾಲೆಂಡರಿನ 3ನೇ ತಿಂಗಳು)

3X5= 15+6 =21X4= 84+9= 93X5
465+27= 492. 492-165 =327.

ಅಂದರೆ ಆ ವ್ಯಕ್ತಿಯ ಜನ್ಮ ತಿಂಗಳು ಮಾರ್ಚ್ ಮತ್ತು ಜನ್ಮ ದಿನಾಂಕ 27 ಎಂದಾಯಿತು.

# ಸೌಮ್ಯ ಸ್ವಭಾವದ, ರಾಷ್ಟ್ರಪತಿ ಪದಕ ವಿಜೇತ ಶ್ರೀ ಬೈತಡ್ಕ ಅಯ್ಯಪ್ಪ ಜೋಯಪ್ಪ

**ಪೋಲಿಸ್** ಇಲಾಖೆ, ಪೋಲಿಸ್ ಎಂದಾಗ ಮನುಷ್ಯ ಎನಿಸಿಕೊಂಡವನು ತನ್ನ ಗಮನವನ್ನು ಇತ್ತ ಹರಿಸುತ್ತಾನೆ. ಹೀಗೇಕೆ ? ಮುಜುಗರವೇ ?, ಹೆದರಿಕೆಯೇ ? ಬೈತಡ್ಕ ಜೋಯಪ್ಪ, B.Sc. ಪೋಲಿಸ್ ಇಲಾಖೆಯ 27 ವರ್ಷಗಳ ಅನುಭವದಲ್ಲಿ ಇದನ್ನೆಲ್ಲಾ ಅಲ್ಲಗಳೆಯುತ್ತಾರೆ. ಡಿ.ವೈ.ಎಸ್.ಪಿ. ಯಾಗಿ ಇಂದು ಬೆಂಗಳೂರಿನ ಲೋಕಾಯುಕ್ತದಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ. 'ಕೊಡಗು ಸಂಗಾತಿ' ಗೌಡ ಜನಾಂಗದ ಪರವಾಗಿ ವಂದನೆಗಳನ್ನು ಅರ್ಪಿಸುತ್ತಾ ಮಾತಿಗಿಳಿದಾಗ ಬಾಲ್ಯದಿಂದ ಇಂದಿನವರೆಗಿನ ಕೆಲವು ಅನುಭವಗಳನ್ನು ನಿಮ್ಮ ಮುಂದಿಟ್ಟಿದ್ದಾರೆ



ಶ್ರೀಮತಿ/ಶ್ರೀ ಬೈತಡ್ಕ ಜೋಯಪ್ಪ ದಂಪತಿಗಳು

ಸಂಗಾತಿ : ನಿಮ್ಮ ತಂದೆ ತಾಯಿಯ ಪರಿಚಯ ಕೊಡಿ.

ಉ : ಮಡಿಕೇರಿ ತಾಲ್ಲೂಕು, ಪಾಲೂರು ಗ್ರಾಮದ ದಿ|| ಬೈತಡ್ಕ ಅಯ್ಯಪ್ಪ ತಂದೆ, ದಿ|| ತಂಗಮ್ಮ ತಾಯಿ. ನಾವು 7 ಜನ ಮಕ್ಕಳು, ಅದರಲ್ಲಿ ಇಬ್ಬರು ಹೆಣ್ಣು ಮಕ್ಕಳು. ಎಲ್ಲರು ಸರ್ಕಾರಿ ಹುದ್ದೆಯಲ್ಲಿದ್ದು, ಒಬ್ಬ ನಿವೃತ್ತ ಉಪಾಧ್ಯಾಯ, ಇನ್ನೊಬ್ಬ ಸೈನಿಕ ಸೇವೆ, ಮತ್ತೊಬ್ಬ ವಾಯುಪಡೆಯಲ್ಲಿ ನಿವೃತ್ತಿ ಹೊಂದಿ ಈಗ ಎಲ್.ಐ.ಸಿ.ಯಲ್ಲಿ ಅಧಿಕಾರಿ, ಮಗದೊಬ್ಬ ವ್ಯವಸಾಯಗಾರ.

ಸಂಗಾತಿ : ನಿಮ್ಮ ವಿದ್ಯಾಭಾಸ ಎಲ್ಲೆಲ್ಲಿ ಮುಗಿಸಿದಿರಿ ?

ಉ : 1960 ರಲ್ಲಿ ಆಗಿನ 3rd Formನ್ನು ಬೆಟ್ಟಗೇರಿಯ ಮಿಡ್ಲ್ ಸ್ಕೂಲ್‌ನಲ್ಲಿ ಮಾಡಿದ ನಾನು ಪಾಠ ಪ್ರವಚನಗಳಲ್ಲಿ ಮೊದಲನೆ ಯುವನಾಗಿದ್ದೆ. ನಾಪೋಕ್ಲುವಿನಲ್ಲಿ 8ನೇ ತರಗತಿಯಿಂದ 10ರವರೆಗೆ ಸರ್ಕಾರಿ ಶಾಲೆಯಲ್ಲಿ ಮುಗಿಸಿದೆ. ಅಲ್ಲಿ ಎಸ್.ಎಸ್.ಎಲ್.ಸಿ.ಯಲ್ಲಿ 2ನೇ ರ್‍ಯಾಂಕ್ ಗಳಿಸಿದೆ. ಪಿ.ಯು.ಸಿ. ಯನ್ನು 1963 ರಲ್ಲಿಯೂ ಹಾಗೂ 1967ರಲ್ಲಿಬಿ.ಎಸ್ಸಿ.ಪದವಿಯನ್ನು ಮಡಿಕೇರಿಯ ಸರ್ಕಾರಿ ಕಾಲೇಜಿನಲ್ಲಿ ಪಡೆದೆ. ಪಾಲೂರು ಗ್ರಾಮಕ್ಕೆ ಆಗ ಪದವಿ ಪಡೆದವರಲ್ಲಿ ನಾನು ಮೊದಲಿಗನೆನ್ನಬೇಕು. ಇಲ್ಲಿ ತಂದೆಯವರ ಪ್ರೋತ್ಸಾಹ ಬಹು ಪ್ರಾಮುಖ್ಯವೆಂದೇ ಹೇಳಬೇಕು.

---

**ಪುಟ್ಟ ಮಕ್ಕಳನ್ನು ಹೆದರಿಸಲು, ಸುಮ್ಮನಿರಿಸಲು ಪೋಲಿಸ್ ಬರುತ್ತಾನೆ ಹಿಡಿದುಕೊಂಡು ಹೋಗುತ್ತಾನೆ ಎಂದಾಗ ಮಕ್ಕಳ ಸದ್ದಡಗುವುದನ್ನು ನೋಡಬಹುದು. ಹೀಗೆ ಹೆದರಿಸಿಕೊಂಡು ಬಾಲ್ಯದಿಂದ ಪ್ರೌಢಾವಸ್ಥೆಗೆ ಬಂದು ಉತ್ತಮ ಪೋಲಿಸ್ ಹುದ್ದೆಗೇರಿ, ನಮ್ಮ ಗೌಡ ಜನಾಂಗದ ಹಿರಿಮೆಗೆ ಪಾತ್ರರಾದ ಶ್ರೀ ಬೈತಡ್ಕ ಅಯ್ಯಪ್ಪ ಜೋಯಪ್ಪನವರ ಅನುಭವ, ವಿಚಾರವಿನಿಮಯವನ್ನು ಇಲ್ಲಿಡಲು ಇಚ್ಚಿಸುತ್ತೇವೆ.**

**-ಸಂ.**

---

ಸಂಗಾತಿ : ನೀವು ಮೊದಲು ಪಾದಾರ್ಪಣೆ ಮಾಡಿದ ಹುದ್ದೆ ?

ಉ : ವಿಜ್ಞಾನ ವಿಭಾಗದಲ್ಲಿ ಪದವಿ ಪಡೆದವರು ಬಹಳ ವಿರಳವಿದ್ದರು. ಹೀಗಾಗಿ ನನಗೆ ತಕ್ಷಣ ಬೆಟ್ಟಗೇರಿಯ ಹೈಸ್ಕೂಲ್

---

ಸಂದರ್ಶನ, ಲೇಖನ :

**ಕಟ್ರತನ ಜಯರಾಂ**

---

ನಲ್ಲಿ ಗಣಿತ ಅಧ್ಯಾಪಕನಾಗಿ ಕೆಲಸ ದೊರೆಯಿತು. ಇಲ್ಲಿ 4 ವರ್ಷ ಪ್ರಾಧ್ಯಾಪಕನಾಗಿ ದುಡಿದೆ. ಈ ಸಂದರ್ಭದಲ್ಲಿ ನನ್ನ ಮಾಸ್ಟರಿಕೆಯು ಮಕ್ಕಳಿಗೆ ಒಳ್ಳೆಯ ತಳಹದಿಯನ್ನು ಹಾಕಿತು. ಅದಕ್ಕಾಗಿ ಸತತ 4 ವರ್ಷವು ನನ್ನ ವಿದ್ಯಾರ್ಥಿಗಳು ಬಹಳ ಉತ್ತಮ ಮಟ್ಟದಲ್ಲಿ ತೇರ್ಗಡೆ ಹೊಂದಿ, ಉದಯ ಹೈಸ್ಕೂಲಿಗೆ ಒಳ್ಳೆಯ ಹೆಸರನ್ನು ತಂದಿದ್ದರು. (ಇಲ್ಲೊಂದು ಮಾತನ್ನು ಹೇಳಲು ಇಚ್ಚಿಸುತ್ತೇನೆ. ಈ

ಉದಯ ಹೈಸ್ಕೂಲ್ ಸ್ಥಾಪನೆಗೆ ನಮ್ಮ ಜನಾಂಗದ ಕೆಲವರು ಶ್ರಮಿಸಿದ್ದರು. ಅವರಲ್ಲಿ ದಿ|| ಪಟ್ಟಡ ಮುತ್ತಣ್ಣ, ದಿ|| ಮೊಟ್ಟೀರ ಪೊನ್ನಪ್ಪ, ದಿ|| ನೆಯ್ಯಣಿರ ಬೋಪಯ್ಯ ಬಹು ಮುಖ್ಯ ಪಾತ್ರ ವಹಿಸಿದ್ದರು) ಅನಂತರ 1971 ರಲ್ಲಿ ನಾನು ಪೋಲಿಸ್ ಇಲಾಖೆಗೆ ಸೇರಿದೆ.

ಸಂಗಾತಿ : ಪೋಲಿಸ್ ಇಲಾಖೆಗೆ ಬಂದಾಗ ನಿಮ್ಮ ಅಧಿಕಾರ (ಪೋಸ್ಟಿಂಗ್) ಏನಿತ್ತು ? ಮತ್ತು ಪ್ರೇರಣೆ ಯಾರಿಂದ ಲಾದರು ಇತ್ತೆ ?

ಉತ್ತರ : ನಾನು ಎಸ್.ಐ. ಆಗಿ ಇಲಾಖೆಗೆ ಸೇರ್ಪಡೆಯಾದೆ. ಒಂದು ವರ್ಷ ಟ್ರೈನಿಂಗ್ ಮೈಸೂರಿನಲ್ಲಿ ಆಯಿತು. ಆಗ ನಾನು ಒಬ್ಬನೇ ಒಬ್ಬ ಗೌಡ ಜನಾಂಗದವನಾಗಿದ್ದೆ. ಅನಂತರ ಆರು ತಿಂಗಳು ಬೆಂಗಳೂರಿನಲ್ಲಿ ಪ್ರೊಬೆಷನರಿ ಮುಗಿಸಿದೆ. ಈ ಸಂದರ್ಭದಲ್ಲಿ ಐ.ಜಿ.ಪಿ. ಲೂಯಿಸ್ ರವರಿಂದ ಉತ್ತಮ ಫೈಯರಿಂಗ್ (ಪಿಸ್ತೂಲ್ ಮತ್ತು ರೈಫಲ್) ಪ್ರಸಿದ್ಧಿಯಾಯಿತು. ಅನಂತರ ನಾನು ಎಸ್.ಐ. ಆಗಿ ಬೆಂಗಳೂರಿನಲ್ಲಿ ಅತೀ ಸೂಕ್ಷ್ಮ ಪ್ರದೇಶಗಳಲ್ಲಿ ಕಾರ್ಯ ನಿರ್ವಹಿಸಿದೆ. ನಾನು ಪೋಲಿಸ್ ಇಲಾಖೆಗೆ ಬರಲು ನನ್ನ ಸ್ವಇಚ್ಛೆ ಮತ್ತು 1970ರಲ್ಲಿ ಮೊಟ್ಟೀರ ಸುಬ್ಬಯ್ಯ ನಂಜಪ್ಪನವರು ಮಾರ್ಗದರ್ಶನ ನೀಡಿದರು. ಅವರೆ ನನಗೆ ಗಾಡ್‌ಫಾದರ್ ಆಗಿದ್ದರು.

ಸಂಗಾತಿ : ಪೋಲಿಸ್ ಇಲಾಖೆಯಲ್ಲಿ ಈಗ ಯಾವ ಹುದ್ದೆಯಲ್ಲಿದ್ದೀರಿ? ಇಲಾಖೆಯಲ್ಲಿ ನಡೆದುಬಂದ ಹಂತಗಳನ್ನು ತಿಳಿಸಿ ?

ಉ ; ಈಗ ಸ್ವಲ್ಪ ದಿನಗಳ ಹಿಂದೆ ನನಗೆ ಮುಂಬಡ್ತಿ ಹೊಂದಿ ಸರಕಾರದ ಲೋಕಾಯುಕ್ತದಲ್ಲಿ ಬೆಂಗಳೂರು ವಲಯದ ಡಿ.ವೈ.ಎಸ್.ಪಿ. ಆಗಿದ್ದೇನೆ. ಇದು ನನ್ನ ಇಚ್ಛೆಗೆ ಅನುಗುಣವಾಗಿದೆ ಮತ್ತು ತೃಪ್ತಿ ತಂದಿದೆ.

ಪೋಲಿಸ್ ಇಲಾಖೆಯಲ್ಲಿ ಮೊಟ್ಟ ಮೊದಲು ಎಸ್.ಐ. ಆಗಿ ನಂತರ ಇನ್‌ಸ್ಪೆಕ್ಟರ್ ಆಗಿ ನಂತರ ಮುಂಬಡ್ತಿಯೊಂದಿಗೆ ಡಿ.ವೈ.ಎಸ್.ಪಿ. ಆಗಿದ್ದೇನೆ. ಹೀಗಿರುವಾಗ ನಾನು ಶ್ರದ್ಧೆ, ಶುದ್ಧ ಹಸ್ತ ಹಾಗು ನೇರ ನಡವಳಿಕೆಯಿಂದ ಬೆಂಗಳೂರಿನ ಎಲ್ಲಾ ಸೂಕ್ಷ್ಮ ಪ್ರದೇಶಗಳಲ್ಲಿ ಕಾರ್ಯನಿರ್ವಹಿಸಿ, ಒಳ್ಳೆಯ ಹೆಸರನ್ನು ಪಡೆದೆ ಎನ್ನಬಹುದು. ಕೆಲವು ಪ್ರದೇಶಗಳಲ್ಲಿ ರಾಜಕೀಯ ಒತ್ತಡ, ರೌಡಿಗಳ ಹಾವಳಿಯನ್ನು ನಿಭಾಯಿಸಿಕೊಂಡು ಬರುವುದು ಸುಲಭ ಸಾಧ್ಯವಾಗಲಿಲ್ಲ.

ಸಂಗಾತಿ : ನಿಮಗೆ ಕೆಲವು ಮುಖ್ಯ ಪ್ರಶಸ್ತಿಗಳು ದೊರೆತಿವೆ ಎಂದು ತಿಳಿಯಿತು, ಅವುಗಳು ಯಾವುವು ? ಮತ್ತು ಏತಕ್ಕಾಗಿ ದೊರೆಯಿತು ?

ಉ : ನಮ್ಮ ಇಲಾಖೆಯ ಕಾರ್ಯಕ್ರಮಗಳಲ್ಲಿ ನಾನು ನಿರ್ವಹಿಸುತ್ತಿದ್ದ ಶ್ರದ್ಧೆ ಮನೋಭಾವನೆ ಉತ್ತಮ ಭವಿಷ್ಯವನ್ನು ನೀಡಿತು. ಮೊದಲನೆಯದಾಗಿ ಇಲಾಖೆಯಲ್ಲಿ ನಡೆಯುವ ಹಲವು ಸ್ಪರ್ಧೆಗಳಲ್ಲಿ ಶೂಟಿಂಗ್ ಒಂದು ಮುಖ್ಯ ಅಂಗ. ನಾನು ಸತತವಾಗಿ ರೈಫಲ್ ಮತ್ತು ಪಿಸ್ತೂಲ್‌ನಲ್ಲಿ ಉತ್ತಮ ಗುರಿಕಾರ ಎಂಬ ಪ್ರಶಸ್ತಿಯನ್ನು ವರ್ಷಂಪ್ರತಿ ಪಡೆಯುತ್ತಿದ್ದೇನೆ. ಆ ಸ್ಥಾನವನ್ನು ಇಂದಿಗೂ ನಾನು ಉಳಿಸಿಕೊಂಡಿದ್ದೇನೆ. ಅನಂತರ 1992 ರಲ್ಲಿ ಉತ್ತಮ ಸೇವೆಗೆ ಮುಖ್ಯಮಂತ್ರಿಗಳ ಚಿನ್ನದ ಪದಕದೊಂದಿಗೆ ಹಣವರೂಪದಲ್ಲಿ ಕೊಡುಗೆಯಾಯ್ತು.

1993ರಲ್ಲಿ ನ ಅತ್ತ್ಯುತ್ತಮ ಸೇವೆಗೆ ಮೆಚ್ಚಿ ರಾಷ್ಟ್ರಪತಿಗಳ ಚಿನ್ನದ ಪದಕವು ದೊರೆಯಿತು. (ಲಾ ಆರ್ಡರ್ ಸೆರ್ಕ್ಷ್)

ಸಂಗಾತಿ : ನಮ್ಮ ಜನಾಂಗದಲ್ಲಿ ನೀವೊಬ್ಬ ಒಳ್ಳೆಯ ಹುದ್ದೆ, ಅಂತಸ್ತಿನಲ್ಲಿದ್ದೀರಿ ಎನಿಸಿದೆ. ಹೀಗಿರುವಾಗ ಗೌಡ ಸಮಾಜಕ್ಕೆ ನಿಮ್ಮ ಸೇವೆ ಏನು ?

ಉತ್ತರ : ನಮ್ಮ ಹುಡುಗರು ನನ್ನಲ್ಲಿಗೆ ಬರಲಿ ನಾನು ಖಂಡಿತವಾಗಿಯೂ ಸಹಾಯ ಮಾಡುತ್ತೇನೆ. ಸಮಾಜಕ್ಕಾಗಿ ನಾನು ಈಗಾಗಲೇ ಧನ ಸಹಾಯವನ್ನು ಅಲ್ಲದೆ, ಪರೋಕ್ಷವಾಗಿ ಹಲವು ಸಹಾಯವನ್ನು ಸಹ ಮಾಡಿದ್ದೇನೆ. ನನ್ನ ಇಲಾಖಾ ಒತ್ತಡದಲ್ಲಿ, ಪರೋಕ್ಷವಾಗಿ ಸಹಕರಿಸಲು ಮಾತ್ರ ಸಾಧ್ಯ ಎಂದೆನಿಸುತ್ತದೆ. ಮತ್ತು ಚೆಟ್ಟಗೇರಿಯ ಶಾಲೆಗೆ ಒಂದು ಟಿ.ವಿ. ಯನ್ನು ನೀಡಿದ್ದೇನೆ. ಅದು ಇಂದಿಗೂ ಕಾಣಬಹುದು. ದಕ್ಷಿಣ ಕನ್ನಡ ಮತ್ತು ಕೊಡಗು ಗೌಡ ಸಮಾಜದ ಒಬ್ಬ ಮುಖ್ಯ ಕಾರ್ಯಕರ್ತನಾಗಿದ್ದೆ.

ಸಂಗಾತಿ : ನಿಮ್ಮ ಧರ್ಮಪತ್ನಿ ಮತ್ತು ಮಕ್ಕಳ ಬಗ್ಗೆ ಸ್ವಲ್ಪ ವಿವರಣೆ ಕೊಡಿ.

ಉ : ನಾನು 1973 ರಲ್ಲಿ ಮೊಟ್ಟೀರ ಪದ್ಮಾವತಿಯಳನ್ನು ಮದುವೆಯಾದೆ, ನಂತರ ಕಾಲವಿಧಿಯೋ ಏನೋ 1½ವರ್ಷದ ಅಂತರದಲ್ಲಿ ಪದ್ಮಾವತಿಯನ್ನು ಕಳೆದುಕೊಂಡೆ, ನಂತರ 1975ರಲ್ಲಿ ಡಾ|| ಬೋಜಮ್ಮ (ರತಿ) ಳನ್ನು ಮದುವೆಯಾದೆ. ಆಗ ರತಿ ಇನ್ನೂ ಪ್ರಥಮ MBBS ನ್ನು ಓದುತ್ತಿದ್ದಳು. ಈಗ ರಾಜೇಂದ್ರನಗರ,ಬೆಂಗಳೂರು ಇಲ್ಲಿನ ESI ಆಸ್ಪತ್ರೆಯಲ್ಲಿ ಡಾಕ್ಟರ್ ಆಗಿದ್ದಾಳೆ. ಮೊದಲನೆ ಮಗಳು B.J. ಲೀಲಾವತಿ B. E. ಕೊನೆಯ ಹಂತದಲ್ಲಿದ್ದಾಳೆ. ಎರಡನೆಯವಳು B.J. ಲಕ್ಷ್ಮಿ PUC ಮುಗಿಸಿದ್ದಾಳೆ. ಇವಳು SSLC ಯಲ್ಲಿ ಶೇ. 95 ರಷ್ಟು ಅಂಕಗಳಿಸಿ 18 ನೇ ರ‍್ಯಾಂಕ್ ಪಡೆದಿದ್ದಳು. ಮೂರನೆಯವನು B.J. ಲೋಹಿತ್ 10ನೇ ತರಗತಿ ಓದುತ್ತಿದ್ದಾನೆ.

(15ನೇ ಪುಟ ನೋಡಿ)

# ಗೌಡ - ಗೌಡ ರಾಜ್ಯ

(ಕಳೆದ ಸಂಚಿಕೆಯಿಂದ)

ರಾಮಾನುಜಾಚಾರ್ಯರು ಮೈಸೂರು ದೇಶಕ್ಕೆ ಬಂದು ಹೊಯ್ಸಳರ ಆಶ್ರಯದಲ್ಲಿ ಮೇಲುಕೋಟೆಯಲ್ಲಿ ತಮ್ಮ ಆಶ್ರಯವನ್ನು ಸ್ಥಾಪಿಸಿ ಶ್ರೀ ವೈಷ್ಣವ ಪಂಥವನ್ನು ಸಾರಿದರು. ಇವರು ವಾದದಲ್ಲಿ ಜೈನ ಯತಿಗಳನ್ನು ಸೋಲಿಸಿದರು. ಇವರ ಉಪದೇಶದಿಂದ ಹೊಯ್ಸಳ ಚಕ್ರವರ್ತಿ ಬಿಟ್ಟಿದೇವರಾಯನು ಮತಾಂತರ ಹೊಂದಿ ವಿಷ್ಣುವರ್ಧನನೆಂಬ ಹೆಸರನ್ನು ಇಟ್ಟುಕೊಂಡು ವೈಷ್ಣವನಾಗಿ ಬೇಲೂರಿನ ಶ್ರೀ ಚನ್ನಕೇಶವಸ್ವಾಮಿ ದೇವಾಲಯವನ್ನು ಕಟ್ಟಿಸಿದನು.

ಈ ಎರಡೂ ಕಾರಣಗಳಿಂದ ಮೇಲುಕೋಟೆ ಮತ್ತು ಬೇಲೂರುಗಳು ಶ್ರೀ ವೈಷ್ಣವ ಪಂಥದ ಪ್ರಸಾರ ಕೇಂದ್ರಗಳಾಗಿ ಶೈವ ಸಂಪ್ರದಾಯದ ಹಲವಾರು ಒಕ್ಕಲಿಗ ಕುಟುಂಬಗಳು ಮತಾಂತರ ಹೊಂದಿ ವೈಷ್ಣವರಾಗಿ "ನಾಮಧಾರಿ" ಒಕ್ಕಲಿಗರಾಗಿರುತ್ತಾರೆ.

"ನಾಮಧಾರಿ" ಯೆಂಬುವರು ಒಕ್ಕಲಿಗರಲ್ಲಿ ಮಾತ್ರವೇ ಎಂಬುದೇನಿಲ್ಲ. ಹರಿಜನರಿಂದ ಸವರ್ಣಿಗಳಾದ ನಾನಾಮತಗಳಲ್ಲಿಯೂ "ನಾಮಧಾರಿ" ಮತ್ತು "ಶೈವರು" ಎಂಬ ಎರಡು ಪಂಗಡಗಳೂ ಕಂಡು ಬರುತ್ತಿವೆ. ಅದನ್ನು ವಿವರಿಸುವ ಅಗತ್ಯವಿಲ್ಲ. ಶೈವರು ಹಣೆಗೆ ವಿಭೂತಿ ಧರಿಸುವಂತೆ ಇವರು ಮೂಗಿನ ನೇರಕ್ಕೆ ಹಣೆಯ ಮೇಲೆ ಕುಂಕುಮದ ನೆಟ್ಟನೆಯ ಗೀಟು ಹಾಕಿಕೊಳ್ಳುತ್ತಾರೆ. ಅದರಿಂದ ಇವರಿಗೆ ನಾಮಧಾರಿಯೆಂಬ ಹೆಸರು ಬಂದಿದೆ.

ಸಾಗರದಿಂದ ಪುತ್ತೂರು ಸುಳ್ಯ ಸಂಪಾಜೆವರೆಗಿನ ಪಶ್ಚಿಮ ಘಟ್ಟಗಳ ಪರ್ವತ ಶ್ರೇಣಿಯಲ್ಲಿರುವ ಒಕ್ಕಲಿಗ ಗೌಡ ನಾಮಧಾರಿಗಳ ಶಿಷ್ಟಾಚಾರ ಸಂಪ್ರದಾಯಗಳು ಬಹಳವಾಗಿವೆ. ಇವರಲ್ಲಿ ಒಂದು ಶಿಸ್ತಿನ ಸಂಘಟನೆಯನ್ನು ನೋಡಬಹುದು. ಕುಲದ ಆಚಾರ ವಿಚಾರಗಳೆಲ್ಲ "ಕಟ್ಟೆಮನೆ"ಯವರ ನಿರ್ದೇಶನಕ್ಕೆ ಒಳಪಟ್ಟಿವೆ. ಲಗ್ನಕಾರ್ಯ ಮುಂತಾದ ವಿಶೇಷಕಾರ್ಯಗಳೆಲ್ಲವೂ ಬ್ರಾಹ್ಮಣ ಪುರೋಹಿತರಿಂದಲೇ ನಡೆಸುತ್ತಾರೆಯಾದರೂ ಶುದ್ಧಿ, ಸಂಪ್ರೋಕ್ಷಣೆ, ಪುಣ್ಯಾರ್ಚನೆ, ಪಿಂಡ ಪ್ರಧಾನ ಮುಂತಾದ ಕೆಲಸಗಳನ್ನೆಲ್ಲಾ "ಒಪ್ಪಮಯ್ಯ ವೈಷ್ಣವೀಯ:" ರುಗಳಿಂದಲೂ ಮಾಡಿಸುತ್ತಾರೆ.

ಇವರ ಮುಖ್ಯ ಹಬ್ಬಹರಿದಿನಗಳೆಂದರೆ ಹರಿಸೇವೆ, ಕೆಂಚರಾಯನ ಸೇವೆ, ಶ್ರಾವಣ ಮಾಸ, ಶ್ರೀ ರಾಮನವಮಿ, ಶ್ರೀ ಕೃಷ್ಣಾಷ್ಟಮಿಗಳೇ ಆದರೂ ಎಲ್ಲಾ ಹಿಂದೂ ಹಬ್ಬಗಳನ್ನು ಆಚರಿಸುತ್ತಾರೆ. ಶೈವರಲ್ಲಿ ಹಿರಿಯರ ಹಬ್ಬ ಆಶ್ವಯುಜ ಶುದ್ಧ ಪಿತೃಪಕ್ಷದಲ್ಲಿ ಬರುವಂತೆ ಇವರು ಅದೇ ದಿನಗಳಲ್ಲಿ ಆಚರಿಸುತ್ತಾರೆ. ಆದರೆ ಬಯಲುಸೀಮೆಯ ನಾಮಧಾರಿಗಳು ಶ್ರಾವಣಮಾಸದಲ್ಲಿ ಹಿರಿಯರ ಹಬ್ಬವನ್ನು ಆಚರಿಸುತ್ತಾರೆ. ಮತ್ತು ಆದಿ ಪಿತೃಗಳ ಪ್ರೀತ್ಯರ್ಥವಾಗಿ ಮಾಂಸಹಾರವನ್ನು ಧಾರಾಳವಾಗಿ ಉಪಯೋಗಿಸುತ್ತಾರೆ. ಮಲೆನಾಡಿನ ನಾಮಧಾರಿಗಳ ಮನೆಯಲ್ಲಿ ಶ್ರಾವಣಮಾಸದಲ್ಲಿ ಮದ್ಯ ಮಾಂಸಗಳು ಮನೆಯ ಒಳಗೆ ಪ್ರವೇಶವಿಲ್ಲ.

ಇವರು ಹರಿಸೇವೆಯನ್ನು ಬಹಳ ವೈಭವದಿಂದ ಆಚರಿಸುತ್ತಾರೆ. ಮೂರು ದಿನಗಳವರೆಗೆ ಉಪವಾಸ ವೃತಾಚರಣೆ, ತುಳಸೀ ಕಟ್ಟೆಯನ್ನು ಚಪ್ಪರ ತಳಿರು ತೋರಣಗಳಿಂದ ಅಲಂಕರಿಸಿ ರಾತ್ರಿ ಇಡೀ ಗೋವಿಂದ ನಾಮ, ಸಂಕೀರ್ತನೆ, ಭಜನೆ, ಹರಿಕಥೆ, ಯಕ್ಷಗಾನ ಬಯಲಾಟ, ಕೋಲಾಟ, ಅನ್ನ ಸಂತರ್ಪಣೆ ಮುಂತಾಗಿ ಧಾರಾಳ ಸೇವಾ ಕಾರ್ಯ ನಡೆಸುತ್ತಾರೆ. ಸಾಮಾನ್ಯವಾಗಿ ಹರಿಸೇವೆಯನ್ನು ಮನೆತನವಲ್ಲಿ ನಡೆದು ಬಂದಂತೆ ಒಂದು ಊರಿನಲ್ಲಿ ಒಬ್ಬರು ಅಥವಾ ಕಟ್ಟೇಮನೆಯವರು ನಡೆಸುತ್ತಾರೆ. ಅವರಿಗೆ ಗ್ರಾಮಸ್ಥರು ಮತ್ತು ಬಂಧು ಬಳಗದವರೂ ಬಂದು ಸಹಕರಿಸುತ್ತಾರೆ.

ಹರಿಸೇವೆಯು ಕೆಂಚರಾಯನ ಸೇವೆಯಲ್ಲಿ ಮುಕ್ತಾಯವಾಗುತ್ತದೆ ಸೇವಾ ವಿವರ ಹೀಗಿದೆ.

ಹರಿಸೇವೆ ಮುಗಿದ ಮಾರನೇ ದಿನ ಮನೆಯಿಂದ ಸ್ವಲ್ಪ ದೂರದಲ್ಲಿ ಅದಕ್ಕಾಗಿ ಮೀಸಲಾಗಿರುವ ಸ್ಥಳದಲ್ಲಿ ನೆಲ ಸ್ವಚ್ಛ ಮಾಡಿ ಸಾರಿಸಿ ನಾಲ್ಕು ಕಂಬಗಳ ಚಪ್ಪರ ಹಾಕಿ ತಳಿರು ತೋರಣ, ಹೂಗಳಿಂದ ಅಲಂಕರಿಸುವುದು. ಚಪ್ಪರದ ಮಧ್ಯೆ ಕುಡಿ ಬಾಳೆ ಎಲೆ ಇಟ್ಟು ಅದರಲ್ಲಿ ಭತ್ತ ರಾಶಿ ಹಾಕಿ, ಅದರ ಮೇಲೆ ತ್ರಿಶೂಲವನ್ನು ನಿಲ್ಲಿಸುವುದು. ಧಾನ್ಯ ರಾಶಿ ಪಕ್ಕದಲ್ಲಿ ಒಂದು ಖಡ್ಗವನ್ನು ಇಡುವುದು. ಧಾನ್ಯ ರಾಶಿ ಎದುರುಗಡೆ ನೀರು ತುಂಬಿದ ಕಳಸ ಸ್ಥಾಪನೆ ಮಾಡಿ ಅದರಲ್ಲಿ ಎರಡು ನೆಕ್ಕಿಗಿಡದ ಕೊನೆ ಇಡುವುದು. ಕಳಸ-ತ್ರಿಶೂಲ- ಖಡ್ಗಗಳಿಗೆ ವಿಭೂತಿ-ಗಂಧ-ಅರಿಶಿನ-ಕುಂಕುಮ ಹಚ್ಚಿ ಹೂಗಳಿಂದ ಅಲಂಕರಿಸುವುದು. ಕಳಸದ ಪಕ್ಕದಲ್ಲಿ ಕಂಬದೀಪ ವಿಟ್ಟು, ಬಾಳೇ ಪಟ್ಟೆ ತಂದು ಒಂದು ಮೊಳ ಉದ್ದ ಮೂರು ತುಂಡಗಳನ್ನು ಕತ್ತರಿಸಿ, ಅವನ್ನು ಗುಣಾಕಾರವಾಗಿ ನಾರಿನಿಂದ ಕಟ್ಟಿ ಕಳಸದ ಮುಂದೆ ಇಡುವುದು. ಇದರಲ್ಲಿ ಇರುವ ಹಸಿ ಹಿಟ್ಟಿನ ಎಂಟು-ಹತ್ತು ಕಡುಬುಗಳನ್ನು ಇಡುವುದು.

ಒಂದು ಕುರಿ ಅಥವಾ ಕೋಳಿಯನ್ನು ತಂದು ಚಪ್ಪರದ ಮುಂದೆ ನಿಲ್ಲಿಸಿ ಕಳಸ-ತ್ರಿಶೂಲಗಳಿಗೆ ಹಣ್ಣು ಕಾಯಿ ಧೂಪಾರತಿ ಮಾಡಿ ಪೂಜಿಸಿ ಎದುರಿಗೆನಿಲ್ಲಿಸಿರುವ ಪ್ರಾಣಿಯ ಕುತ್ತಿಗೆ ಕೊಯ್ದು, ಬಾಳೆ ಪಟ್ಟೆಯಲ್ಲಿರುವ ಕಡುಬುಗಳ ಮೇಲೆ ಸ್ವಲ್ಪ ನೆತ್ತರು ಬೀಳಿಸುವುದು. ಕೊಯ್ದ ಪ್ರಾಣಿಯನ್ನು ಈಗ ಅಡಿಗೆ ಮನೆಗೆ ಸಾಗಿಸುವುದು.

ಆ ದಿನ ಹಬ್ಬ ಆಚರಿಸಲು ಅಡುಗೆಮಾಡಿರುವ ಎಲ್ಲಾ ಮೀಸಲು ಪದಾರ್ಥಗಳನ್ನು ಸ್ವಲ್ಪ ಸ್ವಲ್ಪ ತಂದು ಕಳಸದ ಮುಂದೆ ಎಲೆ ಹಾಕಿ ಬಡಿಸಿ ಪೂಜೆ ಮಾಡಿ ಭೈರವನಿಗೆ ನೈವೇದ್ಯ ಅರ್ಪಿಸಿದ ನಂತರ, ಎಲ್ಲರೂ ಮಾತನಾಡದೆ ಮೌನವಾಗಿ ಸ್ವಲ್ಪ ದೂರ ಹೋಗಿ ಹಿಮ್ಮುಖವಾಗಿ ನಿಲ್ಲುತ್ತಾರೆ. ಮತ್ತೆ ಬಂದು ಧೂಪಾರತಿ ಮಾಡಿ ಹಿರಿಯರಾದ ಒಬ್ಬೊಬ್ಬರು ಪ್ರಾರ್ಥನೆ ಮಾಡುತ್ತಾರೆ.

"ಭೈರವೇಶ್ವರಾ ಈಗ ನಡೆಸಿದ ಹರಿ ಸೇವೆಯಲ್ಲಿ ಏನಾದರೂ ಲೋಪದೋಷಗಳಾಗಿದ್ದಲ್ಲಿ, ನಿನಗೆ ಉಪಚಾರವಾಗದಿದ್ದಲ್ಲಿ, ನಮ್ಮನ್ನು ಕ್ಷಮಿಸಿ ನಾಡಿನ ಜನರಿಗೂ, ದನ ಕರುಗಳಿಗೂ, ಪೈರು ಪಚ್ಚೆಗಳಿಗೂ, ಏನೊಂದೂ ಉಪದ್ರ ಮಾಡದೆ ಕಾಪಾಡಿಕೊಂಡು ಬರುವುದು" ಇದು ಪ್ರಾರ್ಥನೆಯ ಸಾರಾಂಶ.

ಇದರಿಂದ ನಾಮಧಾರಿಗಳು ಮೊದಲು ಕಾಲಭೈರವನ ಒಕ್ಕಲಾಗಿದ್ದು ಕ್ರಮೇಣ ವೈಷ್ಣವರಾದರೂ, ಪೂರ್ವಾಶ್ರಮದ ಕುಲದೈವದ ಮೇಲಿನ ಭಕ್ತಿ ಭಾವನೆಗಳು ಅಳಿಯಲಿಲ್ಲ. ಪ್ರತಿಯಾಗಿ ಹರಿಸೇವೆಯಿಂದ ಕುಪಿತನಾದ ಪ್ರಳಯ ರುದ್ರನು ಮತ್ತೆ ಲೋಕಕ್ಕೆ ಏನು ಕೇಡು ಮಾಡುವನೋ ಎಂಬ ಭಯದಿಂದ, ವರ್ಷದ ಆ ಒಂದು ದಿನದಲ್ಲಿ ಭೈರವನ ಪೂಜೆ ನಡೆಸುತ್ತಾ ಬಂದಿದ್ದಾರೆ.

ಪ್ರತಿಯೊಂದು ನಾಮಧಾರಿ ಕುಟುಂಬವೂ "ಶನಿವಾರ" ದ ಆಚರಣೆಯನ್ನು ನಿಯಮದಂತೆ ಕಟ್ಟುನಿಟ್ಟಾಗಿ ಆಚರಿಸುತ್ತಾರೆ ಮತ್ತು ಕುಲದೇವರಾದ ತಿರುಪತಿ ವೆಂಕಟರಮಣಸ್ವಾಮಿಯನ್ನು ಮನೆಯಲ್ಲಿಯೇ ಪ್ರತ್ಯೇಕವಾದ ದೇವರ ಕೋಣೆಯಲ್ಲಿ ಇಟ್ಟು ಪ್ರತಿದಿನವೂ ಪೂಜೆ ಮಾಡುತ್ತಾರೆ.

ನಾಥ್‌ಪಂಥ್-ಅವಧೂತ ಯೋಗಗಳಿಗೆ ಕಪಾಲಿ ಕಾಳಮುಖಿ-ಜೋಗಿ ಮುಂತಾದ ಶಿಷ್ಯವರ್ಗದವರು ಮತ ಪ್ರಚಾರಕ್ಕೆ ಪಣ ತೊಟ್ಟಿದ್ದಂತೆ ಶ್ರೀ ವೈಷ್ಣವ ಪಂಥದ ಪ್ರಚಾರಕ್ಕೂ ವೈಷ್ಣವ ಹೆಬ್ಬಾರರು, ಒಷ್ಟಮಯ್ಯಗಳು, ಹರಿದಾಸರು ಮುಂತಾದವರು ಶಿಷ್ಯರಾಗಿದ್ದರು. ಇವರುಗಳಲ್ಲಿ ವೈಷ್ಣವ ಹೆಬ್ಬಾರರುಗಳು ಹೊಯ್ಸಳ ರಾಜರ ಆಶ್ರಯದಿಂದ ಪ್ರಬಲರಾಗಿ ಮತ ಪ್ರಚಾರದಲ್ಲಿ ವಿಶೇಷ ಆಸಕ್ತಿ ಹೊಂದಿದವರಾಗಿದ್ದರು.

(ಮುಂದಿನ ಸಂಚಿಕೆಗೆ)

## ಬೆರಳು ಗುರುತು ಪತ್ತೆಗೆ ನೂರುವರುಷ

ಅಪರಾಧ ಮಾಡುವವರು ಹಲವಾರು ಸಂದರ್ಭಗಳಲ್ಲಿ ತಮ್ಮ 'ಕೈಚಳಕ' ಕುರಿತು ಅಭಿಮಾನದಿಂದ ಜಂಬ ಕೊಚ್ಚಿಕೊಳ್ಳುವುದು ಉಂಟು. ಆದರೆ ಬೆರಳು ಗುರುತು ಪತ್ತೆ ಹಚ್ಚಿ ಅಪರಾಧಿಯನ್ನು ಹಿಡಿಯುವ ಪದ್ಧತಿ ಜಾರಿಗೆ ಬಂದ ಬಳಿಕ ಅಪರಾಧಿಗಳ ಈ ಒಣ ಅಭಿಮಾನಕ್ಕೆ ಕಡಿವಾಣ ಬಿತ್ತು. ಈ ಬೆರಳುಗುರುತು ಪತ್ತೆ ಹಚ್ಚುವ ವಿಧಾನ ಕಂಡುಹಿಡಿದು ಜೂನ್ 12 ಕ್ಕೆ ನೂರುವರ್ಷ.

ಕಲ್ಕತ್ತೆಯಲ್ಲಿ ಮೊಟ್ಟಮೊದಲ ಬಾರಿಗೆ ಬೆರಳು ಗುರುತನ್ನು ಕಂಡುಹಿಡಿವ ರೀತಿಯನ್ನು ರೂಪಿಸಿದ್ದು ಅಂದಿನ ದಕ್ಷಿಣ ಬಂಗಾಳ ಪೋಲೀಸ್ ಮುಖ್ಯಸ್ಥ ಸರ್ ಎಡ್ವರ್ಡ್ ರಿಚರ್ಡ್ ಹೆನ್ರಿ ಅವರು.

ಸರ್ ಹೆನ್ರಿ ಅವರ ಒತ್ತಾಯದ ಮೇರೆಗೆ 1897 ರ ಜೂನ್ 12 ರಂದು ಕಲ್ಕತ್ತೆಯ ರೈಟರ್ಸ್ ಬಿಲ್ಡಿಂಗ್‌ನಲ್ಲಿ ಪ್ರಪಂಚದ ಮೊಟ್ಟ ಮೊದಲ ಬೆರಳು ಗುರತು ಬ್ಯೂರೋ ಸ್ಥಾಪನೆಗೊಂಡಿತು. ಜಪಾನಿನ ವೈದ್ಯರೊಬ್ಬರು ಮಾಡಿದ ಪ್ರಯೋಗವನ್ನು ಅನುಸರಿಸಿ ಬೆರಳು ಗುರುತು ಮೂಲಕ ಅಪರಾಧಿಗಳನ್ನುಪತ್ತೆ ಹಚ್ಚುವ ವಿಧಾನವನ್ನು ಕಂಡುಹಿಡಿದ್ದರು.

ಸರ್ ಹೆನ್ರಿ ಅವರು ಅಪರಾಧಿಗಳನ್ನು ಪತ್ತೆ ಹಚ್ಚಲು ಬಳಸಿದ ಬೆರಳು ಗುರುತು ದಾಖಲೆ ಮಾಡುವ, ವರ್ಗೀಕರಣ ಮಾಡುವ ವಿಧಾನಗಳೇ ಈಗಿನ ವಿಶ್ವದ ಎಲ್ಲಾ ಪೋಲೀಸ್ ವಿಭಾಗಗಳಲ್ಲಿ ಅನುಸರಿಸಲ್ಪಡುತ್ತಿವೆ.

## ವಾಸ್ತವ

ಕಾವೇರಿ ನಮ್ಮಮ್ಮ
ಎಲ್ಲರಿಗೂ ಗೊತ್ತು
ತಮಿಳರಿಗೆ ಈ ನೀರೆ
ಯಾಕೆ ಬೇಕಿತ್ತು ?
ಯಾರದೊ ಸಂಪತ್ತು
ಯಾರಿಗೊ ಹೋಗಿತ್ತು
ಹಕ್ಕುದಾರರಿಗಿಲ್ಲ ಈ
ಕವಡೆ ಕಿಮ್ಮತ್ತು.

● ಸಿ. ರಾಮು,
ಮೈಸೂರು.

# ಹಿರಿಯ ಕ್ರೀಡಾ ಚೇತನ ಶ್ರೀಮತಿ ನಾಟೋಳನ ಸೀತಮ್ಮ ಶ್ರೀಧರ

ಈಗತಾನೇ 4ನೇ ರಾಷ್ಟ್ರೀಯ ಕ್ರೀಡಾ ಕೂಟ ಮುಗಿದಿದೆ. ನಮ್ಮ ನಾಡಿನಲ್ಲಿ ಕ್ರೀಡೆಗೆ ಪ್ರಾಮುಖ್ಯತೆ ಬಹಳವಾದರೂ, ಅದನ್ನು ಬಳಸಿಕೊಂಡವರು ಕೊಡಗು ಗೌಡರಲ್ಲಿ ವಿರಳರೆಂದೇ ಹೇಳಬಹುದು. ಅದರಲ್ಲೂ ಮಹಿಳೆಯರು ಚಿಕ್ಕಂದಿನಲ್ಲಿ ಕ್ರೀಡಾ ಸಾಮರ್ಥ್ಯ ಹೊಂದಿದ್ದರೂ, ಕ್ರಮೇಣ ಸಾಮಾಜಿಕ ಕಟ್ಟುಪಾಡುಗಳಿಂದ, ಸಂಕುಚಿತ ಮನೋಭಾವನೆಗಳಿಂದ ಅಡುಗೆ ಮನೆಗಷ್ಟೇ ಸೀಮಿತವಾಗಿಬಿಡುತ್ತಿರುವುದು ಒಂದು ದೊಡ್ಡ ದುರಂತ. ಆದರೆ ಇಂತಹ ಮಹಿಳೆಯರ ಸಾಲಿನಲ್ಲಿ ನಿಲುಕದೇ ಭಿನ್ನವಾಗಿ ತಮ್ಮ 50ರ ಹಿರಿವಯಸ್ಸಿನಲ್ಲೂ ಮಿಂಚುತ್ತಿರುವ ಹಿರಿಪ್ರತಿಭೆಯೇ ಶ್ರೀಮತಿ ನಾಟೋಳನ ಸೀತಮ್ಮ ಶ್ರೀಧರ.

1946ರಲ್ಲಿ ಭಾಗಮಂಡಲದ ಕೋಳಿಬೈಲು ಸುಬ್ಬಪ್ಪನವರ ಹಿರಿಯ ಮಗಳಾಗಿ ಜನಿಸಿದ ಇವರು, ಚಿಕ್ಕಂದಿನಿಂದಲೇ ಕ್ರೀಡೆಯಲ್ಲಿ ಎತ್ತಿದ ಕೈ. ಅಂದಿನಿಂದ ಇಂದಿನವರೆಗೂ ಇವರು ಯಾವುದೇ ಕ್ರೀಡೆಯಲ್ಲಿ ಭಾಗವಹಿಸಲಿ, ಬಹುಮಾನ ಗಿಟ್ಟಸದೆ ಬರಿಗೈಯಲ್ಲಿ ಹಿಂತಿರುಗಿದವರೇ ಅಲ್ಲ. ಮಡಿಕೇರಿಯ ಸೆಂಟ್ರಲ್ ಹೈಸ್ಕೂಲ್‌ನಲ್ಲಿ ಪಿ.ಯು.ಸಿ. ವರೆಗೆ ವಿದ್ಯಾಭ್ಯಾಸ ಮಾಡಿದ ಇವರು, ಮಡಿಕೇರಿಯ ತಾಲ್ಲೂಕು ಕಛೇರಿಯಲ್ಲಿ ಎರಡು ವರ್ಷಗಳ ಕಾಲ ಸೇವೆ ಸಲ್ಲಿಸಿ ಅನುಭವ ಸಂಪಾದಿಸಿಕೊಂಡ ಬಳಿಕ 1972ರಲ್ಲಿ ಲೋಕೋಪಯೋಗಿ ಇಲಾಖೆಯಲ್ಲಿ ಪ್ರಥಮ ದರ್ಜೆ ಸಹಾಯಕಿಯಾಗಿ ಸೇವೆಗೆ ಸೇರ್ಪಡೆಗೊಂಡು ಈಗಲೂ ಅದರಲ್ಲೇ ಮುಂದುವರೆದಿದ್ದಾರೆ.

ಪ್ರಸಿದ್ಧ ಕ್ರೀಡಾ ಸಂಸ್ಥೆಯಾಗಿರುವ ಅಮೆಚೂರ್ ಕ್ರೀಡಾ ಸಂಸ್ಥೆಯ ಸದಸ್ಯೆಯಾಗಿರುವ ಇವರು ಕಾನ್ಪುರದಲ್ಲಿ ನಡೆದ 19ನೇ ಹಿರಿಯರ ರಾಷ್ಟ್ರೀಯ ಕ್ರೀಡಾ ಕೂಟದಲ್ಲಿ ಭಾಗವಹಿಸಿ ಭಾರದ ಗುಂಡು ಎಸೆತದಲ್ಲಿ ಚಿನ್ನದ ಪದಕ, ತಟ್ಟೆ ಎಸೆತದಲ್ಲಿ ಬೆಳ್ಳಿಯ ಪದಕವನ್ನು ಪಡೆದು, ಜಾವೆಲಿನ್ ಥ್ರೋನಲ್ಲಿ ಕೂದಲೆಳೆ ಅಂತರದಲ್ಲಿ ಬಹುಮಾನ ತಪ್ಪಿಸಿಕೊಂಡರೂ



ನಾಟೋಳನ ಸೀತಮ್ಮ ಶ್ರೀಧರ

ತಮ್ಮ ಅಪ್ರತಿಮ ಸಾಹಸ ಮೆರೆದಿದ್ದಾರೆ. ಇದೇ ಸಂದರ್ಭದಲ್ಲಿ ಇವರು ದಕ್ಷಿಣ ಆಫ್ರಿಕಾದಲ್ಲಿ ನಡೆದ ಅಂತರರಾಷ್ಟ್ರೀಯ ಕ್ರೀಡಾ ಕೂಟದಲ್ಲಿ ಭಾರತದ ಪ್ರತಿನಿಧಿಯಾಗಿ ಭಾಗವಹಿಸುವ ಅರ್ಹತೆ ಪಡೆದುಕೊಂಡರೂ, ಆಗಿನ ಪರಿಸ್ಥಿತಿಯಲ್ಲಿ ಅಲ್ಲಿಗೆ ಹೋಗುವ ಆರ್ಥಿಕ ಸಾಮರ್ಥ್ಯ ತಮ್ಮಲ್ಲಿರಲಿಲ್ಲ ವೆಂಬ ಕೊರಗು ಅವರಲ್ಲಿದೆ.

ಆದರೆ ಇಷ್ಟಕ್ಕೇ ಇವರು ತಮ್ಮ ಪ್ರಯತ್ನವನ್ನು ಕೈಬಿಡಲಿಲ್ಲ. ರಿಕ್ರೀಶಿಯನ್ ಕ್ಲಬ್‌ನಲ್ಲಿ ಮಧ್ಯಾಹ್ನ ಕೇರಂ ಮತ್ತು ಟೆ.ಟೆ. ಆಟಗಳಲ್ಲಿ ತಮ್ಮನ್ನು ತೊಡಗಿಸಿಕೊಂಡರೆ, ಸಂಜೆ ಸೆಟ್ಲ್ ಕಾಕ್ ಆಟದಲ್ಲಿ ಪ್ರತಿದಿನ ಪಾಲ್ಗೊಳ್ಳುವರು. ಮೈಸೂರು ವಿ.ವಿ. ಯ ಪೆವಿಲಿಯನ್‌ನಲ್ಲಿ ತಮ್ಮ ನೆಚ್ಚಿನ ಕ್ರೀಡೆಯಾದ ಭಾರದ ಗುಂಡು ಎಸೆತ, ತಟ್ಟೆ ಎಸೆತ ಹಾಗೂ ಜಾವೆಲಿನ್ ಎಸೆತಗಳ ತರಭೇತಿಯನ್ನು ವಾರಕ್ಕೊಂದಾವರ್ತಿ ಪಡೆಯುತ್ತಿದ್ದಾರೆ. ಪ್ರತಿ ದಿನ ಬೆಳಿಗ್ಗೆ ವ್ಯಾಯಾಮದಲ್ಲಿ ತೊಡಗುವ ಇವರು ಸದಾ ಚಟುವಟಿಕೆ, ಲವಲವಿಕೆಯಿಂದ ಕೂಡಿ ಹಸನ್ಮುಖಿಯಾಗಿ "ಇಂದಿನ ಮಹಿಳೆಯರು ಒಬ್ಬರ ನೋಡಿ ಇನ್ನೊಬ್ಬರು ಆಟೋಟಗಳಲ್ಲಿ ಭಾಗವಹಿಸಬೇಕು. ಸೋಲು ಗೆಲುವು ಮುಖ್ಯವಲ್ಲ. ಸ್ಪರ್ಧಾ ಮನೋಭಾವ ಅಗತ್ಯ. ಆಗ ಮಹಿಳೆಯರು ಮುಂದುವರಿಯಲು ಸಾಧ್ಯ. ಮನೋವೈಶಾಲ್ಯವನ್ನು ಮಹಿಳೆಯರು ರೂಢಿಸಿಕೊಳ್ಳಬೇಕು" ಎಂದು ಈ ಕ್ರೀಡಾಭಿವ್ಯಕ್ತಿ ಇಂದಿನ ನಮ್ಮ ಮಹಿಳೆಯರಿಗೆ ಸಲಹೆ ನೀಡುತ್ತಾರೆ.

ಕಿರುಂದಾಡು ಗ್ರಾಮದ ನಾಟೋಳನ ಶ್ರೀಧರರವರನ್ನು ವಿವಾಹವಾಗಿರುವ ಸೀತಮ್ಮನವರದು ಎರಡು ಗಂಡು ಮಕ್ಕಳ ಚಿಕ್ಕ ಸಂಸಾರ. "ತನ್ನ ಸಾಧನೆಗೆ ಚಿಕ್ಕಂದಿನಲ್ಲಿ ತಂದೆ ತಾಯಿ ಪ್ರೋತ್ಸಾಹ ನೀಡಿದರೆ, ಇಂದು ತಮ್ಮ ಪತಿ ಪೂರ್ಣ ಸಹಕಾರ ನೀಡುತ್ತಿದ್ದಾರೆ" ಎಂದು ಸೀತಮ್ಮನವರು ಸ್ಮರಿಸಿಕೊಳ್ಳುತ್ತಾರೆ. ಶ್ರೀಧರ್‌ರವರು ಎಲ್ಲಾ ವ್ಯಾಯಾಮ ಸಲಕರಣೆಗಳನ್ನು ತಮ್ಮ ಮನೆಯಲ್ಲಿಯೇ ಪತ್ನಿಗೆ ಒದಗಿಸಿಕೊಟ್ಟದ್ದು, ತಾವೂ ಸಹ ಬೆಳಿಗ್ಗೆ ವ್ಯಾಯಾಮ ಮಾಡಿ ಸಕಲಾರೋಗ್ಯವನ್ನು ಸಂಪಾದಿಸಿಕೊಂಡಿದ್ದಾರೆ, ಶ್ರೀಧರ್‌ರವರು ಸೇನೆಯಲ್ಲಿದ್ದು ನಿವೃತ್ತಿ ಹೊಂದಿದವರು. ಹಿರಿಯ ಮಗ ಮೆಕಾನಿಕಲ್ ಇಂಜಿನಿಯರಿಂಗ್‌ನಲ್ಲಿ ಡಿಪ್ಲೊಮಾ ಪಡೆದು ಬೊಂಬಾಯಿಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾರೆ, ಇನ್ನೊಬ್ಬ ಬಿ.ಕಾಂ, ಪದವಿ ಪಡೆದು ಕಂಪ್ಯೂಟರ್ ಶಿಕ್ಷಣ ಸಂಪಾದಿಸಿ ಅದರಲ್ಲೇ ಉಪನ್ಯಾಸಕ

ರಾಗಿದ್ದಾರೆ. ಇವರು ಮೈಸೂರು ವಿ.ವಿ. ಯ ಪ್ರಮುಖ ಹಾಕಿ ಆಟಗಾರರೂ ಆಗಿದ್ದರು. ಇವರೆಲ್ಲರೂ ಸರಳ, ಸೌಮ್ಯ ಸ್ವಭಾವದವರು.

ನಡಿಗೆ ಸ್ಪರ್ಧೆಯಲ್ಲಿಯೂ ಹಲವಾರು ಬಹುಮಾನಗಳನ್ನು ಬಾಚಿಕೊಂಡಿರುವ ಇವರು, ತಮ್ಮ ಜೀವನದಲ್ಲಿ ಬಹುದೂರ ನಡೆದುಬಂದರೂ, ಇವರ ಬಯಕೆಗಳೇನೂ ಬತ್ತಿಲ್ಲ. ಭಾರದಗುಂಡು ಎಸೆತ, ತಟ್ಟೆ ಎಸೆತ, ಜಾವೆಲಿನ್ ಎಸೆತಗಳಲ್ಲಿ ಇನ್ನೂ ದೂರ ಎಸೆದು ರಾಷ್ಟ್ರೀಯ ದಾಖಲೆ ನಿರ್ಮಿಸಿ, ಮತ್ತೆ ವಿದೇಶಕ್ಕೆ ಹೋಗಿ ಚಿನ್ನ ಗೆಲ್ಲುವುದು ಈ ಮಹಾಮಾನಿನಿಯ ಮಹಾದಾಸೆಯಾಗಿದೆ. ಅದಕ್ಕಾಗಿ ಪ್ರಯತ್ನಗಳು ಅವಿರತವಾಗಿ ಸಾಗುತ್ತಿದೆ. ಮನೆಗೆ ಬಂದವರನ್ನು ಮುಗುಳ್ನಗುತ್ತಾ ಸತ್ಕರಿಸುವ ಇವರು 'ಸಂಗಾತಿ'ಯನ್ನು ಕೊಡಗಿನ ಸಂಪ್ರದಾಯದಂತೆಯೇ ಸತ್ಕರಿಸಿದರು. ಪ್ರತಿ ದಿನ ಗೃಹಕಾರ್ಯಗಳನ್ನು ನಿರ್ವಹಿಸಿ, ಕಛೇರಿ ಕೆಲಸ ಮಾಡಿಕೊಂಡು, ಕ್ರೀಡೆಯಲ್ಲಿಯೂ ತೊಡಗಿಸಿಕೊಂಡು, ಅಗತ್ಯಬಿದ್ದಲ್ಲಿ ಗೌಡ ಮಹಿಳಾಭಿವೃದ್ಧಿಗೆ ಶ್ರಮಿಸುವೆ ಎನ್ನುವ ಈ ಹೆಮ್ಮೆಯ ಮಾತೆಯ ಮಮತೆಗೆ 'ಸಂಗಾತಿ' ಯ ನಮನಗಳು.

● ಪಟ್ಟಡ ಶಿವಕುಮಾರ್

## ಸರ್ಪ ಸುತ್ತಿಗೆ ಗುಳಿಗೆ

ಹೈದರಾಬಾದ್ ಮೂಲದ ಸೋಲ್ ಹೆಲ್ತ್ ಫಾರ್ಮಸಿ ಲಿ, ಕಂಪೆನಿಯು ಸರ್ಪಸುತ್ತು ರೋಗವನ್ನು ನಿಯಂತ್ರಿಸುವಂಥ 'ಹೆವಿರ್' ಎಂಬ ಗುಳಿಗೆಯೊಂದನ್ನು ರಾಜ್ಯದಲ್ಲಿ ಬಿಡುಗಡೆ ಮಾಡಿದೆ. ವಿಪರೀತವಾದ ಉರಿ, ನೋವು, ತುರಿಕೆ ಮಾತ್ರವಲ್ಲದೆ ರೋಗಿಗೆ ಭಾರೀ ಕಿರುಕುಳ ನೀಡುವ 'ಹರ್ಪಿಸ್' ರೋಗ ಎಂದೇ ಪ್ರಖ್ಯಾತವಾಗಿದೆ. ಈ ರೋಗಕ್ಕೆ ಆರಂಭದಲ್ಲೇ ಚಿಕಿತ್ಸೆ ಪಡೆದುಕೊಳ್ಳದಿದ್ದರೆ ಅದು ಗಂಭೀರ ರೀತಿಯ ಕ್ಯಾನ್ಸರ್‌ನಂತಹ ಕಾಯಿಲೆಗೆ ನಾಂದಿಯಾಗಬಹುದು.

## ನಮ್ಮ ಹಿರಿಮೆ

ಕೊಡಗು ಭೂಮಿಯದೊಂದು ಪ್ರಧಾನ ಅಂಗ
ನಮ್ಮ ಈ ಸುಸಂಸ್ಕೃತ ಗೌಡ ಜನಾಂಗ
ಎಲ್ಲಾ ರಂಗಗಳಲ್ಲೂ ಮುನ್ನುಗ್ಗುತಿಹೆವು ನಾವಿಂದು
ತಡೆಯಲಾರರು ನಮ್ಮ ಯಾರೂ ಎಂದೆಂದೂ

ನಮ್ಮ ಸಂಸ್ಕೃತಿಯದು ಬಹಳ ಸುಂದರ
ಧೀರತ್ವ, ಶಾಂತಿ, ಸಹನೆ ನಮ್ಮ ಬದುಕಿನ ಸಾರ
ಹತ್ತು ಹಲವು ರೀತಿಯಲಿ ನೂರಾರು ಬಗೆ
ಈ ಭೂಮಿಯ ಹಿರಿಮೆಗೆ ನಮ್ಮ ಕೊಡುಗೆ

ನಮ್ಮ ರಕ್ತದಲಿ ಹರಿಯುತಿದೆ ಪ್ರೀತಿ, ವಿಶ್ವಾಸ, ಒಗ್ಗಟ್ಟು
ಅದೇ ಈ ನಮ್ಮ ಏಳಿಗೆಯ ಗುಟ್ಟು
ಸ್ವಾಭಿಮಾನ, ಮಾನವೀಯತೆ ರಹಿತಬದುಕು ನನಗೆಂದೂ ಬೇಡ
ಎನ್ನುವನು ಪ್ರತಿಯೊಬ್ಬ ಕೆಚ್ಚು ತುಂಬಿದ ಗೌಡ

ನಾವು ನೀಡಿರುವೆವು ದೇಶಕ್ಕೆ ಅಮೂಲ್ಯ ಕಾಣಿಕೆ
ಕಷ್ಟಸಾಧ್ಯ ಆ ಕಾಣಿಕೆಗಳ ಎಣಿಕೆ
ಹೀಗೆಯೇ ಹೆಚ್ಚಲಿ ನಮ್ಮ ಈ ಏಳಿಗೆ
ಸುಖ, ಶಾಂತಿ ತಪ್ಪದಿರಲಿ ನಮ್ಮ ಈ ಬಾಳಿಗೆ.

● ಬೈತಡ್ಕ ಕೆ. ಶ್ರೀಧರ,
ಪಾಲೂರು, ಕೊಡಗು.

## ಚು ಟು ಕ ಗ ಳು

ನಮ್ಮ ಯುವಕರಿಗೆಲ್ಲಾ ವೀಡಿಯೋ ಗೀಳು
ಓದು ಅವರಿಗೆ ಬರಿಯ ಸಮಯ ಹಾಳು
ಊರೊಳಗೆ ನೂರೆಂಟು ವೀಡಿಯೋ ಹೌಸು
ವಿದ್ಯಾರ್ಥಿಗಳಿಗೆ ಓದಲು ಬರುವುದೇ ಮನಸ್ಸು ?

ಕಾಡೆಲ್ಲ ನಾಡಾಗಿ, ಬೆಟ್ಟ ಪಟ್ಟಣವಾಗಿ
ಮಳೆ ಇಲ್ಲ, ಬೆಳೆ ಇಲ್ಲ, ಎಲ್ಲೆಲ್ಲೂ ಚಿಂತೆ
ಬಿಟ್ಟ ಸಿಕ್ಕಿದ ಗಿಡವ ಎಷ್ಟು ನೆಟ್ಟರೇನಂತೆ ?
ದಟ್ಟಡವಿ ಮೋಡಗಳು ಮತ್ತೆ ಬರುಲುಂಟೆ

ಓ ಯುವಕ ಎಲ್ಲೆಲ್ಲೂ ನಿನಗೆಲ್ಲ ಕೆಲಸ
'ಇಂಟರ್‌ವ್ಯೂ'ಗಳೆಲ್ಲಾ ಬರಿಯ ವಿರಸ
ಸ್ವಾಮೀಜಿಯಾಗಿಬಿಡು, ಜೀವನವೇ ಸರಸ
ಹೆಣ್ಣು ಹೊನ್ನು ಮಣ್ಣೆಲ್ಲಾ ಕ್ಷಣದಲ್ಲೇ ಕೈವಶ

ಕಂಡ ಕಂಡಲ್ಲಿ ಕೆಂಪು ಬೋರ್ಡು
ಇದುವೇ ನಮ್ಮ ನಾಡಿನ ಕೇಡು
'ಕುಡಿ ನೀ ಬಾ' ಎಂದು ಕೈಬೀಸಿ ಕರೆದು
'ಬಡತನ ಓಡಿಸಿದೆ' ಎನ್ನುವರು ಮೆರೆದು

● ಬೈತಡ್ಕ ಕೆ. ಹೇಮ

# ಮೂರು ಕ್ಷೇತ್ರಗಳಲ್ಲಿ ಪ್ರಗತಿ, ಅದೇ ನಮ್ಮ ಜನಾಂಗದ ಕೀರ್ತಿ

'ಕೊಡಗು ಸಂಗಾತಿ' ಪಾಕ್ಷಿಕ ಪತ್ರಿಕೆಯು ಉದಯವಾಗಿದ್ದು ನನಗೆ ಮಾತ್ರವಲ್ಲ, ನಮ್ಮ ಜನಾಂಗದ ಎಲ್ಲರಿಗೂ ಒಂದು ಹೆಮ್ಮೆಯ ವಿಷಯ.

ಮುಖ್ಯವಾಗಿ ಕೊಡಗಿನ ಗೌಡ ಜನಾಂಗದವರು ಕೃಷಿಯಲ್ಲಿ, ಔದ್ಯೋಗಿಕ ರಂಗದಲ್ಲಿ ಹಾಗೂ ವಾಣಿಜ್ಯ ಕ್ಷೇತ್ರದಲ್ಲೂ ಪ್ರಗತಿಯನ್ನು ಕಾಣಬೇಕಿದೆ.

**ಕೃಷಿ :** ಕೊಡಗಿನ ಗೌಡ ಜನಾಂಗದಲ್ಲಿ ಹೆಚ್ಚಿನವರು ಕೃಷಿಯನ್ನೆ ಜೀವನಾಧಾರವಾಗಿ ಮಾಡಿಕೊಂಡಿದ್ದಾರೆ. ಈಗಲೂ ತಾತ ಮುತ್ತಾತನ ಕಾಲದ ಕೃಷಿ ಪದ್ಧತಿಯನ್ನೇ ಅನುಸರಿಸಿಕೊಂಡು "ಹೊಟ್ಟೆಗೆ ಸಾಕಾದರೆ ಬಟ್ಟೆಗೆ ಸಾಲದು, ಬಟ್ಟೆಗೆ ಸಾಕಾದರೆ ಹೊಟ್ಟೆಗೆ ಸಾಲದು" ಅನ್ನುವ ರೀತಿಯಲ್ಲಿ ಭಾಗಮಂಡಲದಿಂದ ಹಿಡಿದು ಬೆಟ್ಟತ್ತೂರು, ಗಾಳಿಬೀಡು, ಸೂರ್ಲಬ್ಬಿಗಾಗಿ ಸೋಮವಾರಪೇಟೆ ತನಕ ಜನರು ಕಷ್ಟ ಜೀವನ ಸಾಗಿಸುತ್ತಿದ್ದಾರೆ.

ಆದ್ದರಿಂದ ಈಗಿನ ಆಧುನಿಕ ಕೃಷಿಯಲ್ಲಿ ಮಾರ್ಗದರ್ಶನ ಕೊಡುವುದು ಮುಖ್ಯ. ಅದಕ್ಕಾಗಿ ಅಲ್ಲಲ್ಲಿ ಅಂದರೆ ಗ್ರಾಮ ಗ್ರಾಮಗಳಲ್ಲಿ ಗೌಡ ಸಂಘ ಅಥವಾ ರೈತ ಸಂಘದ ಸಂಘಟನೆಯನ್ನು ಮಾಡುವುದರ ಮೂಲಕ ಕೃಷಿ ತಜ್ಞರಿಂದ ಆಧುನಿಕ ಕೃಷಿಪದ್ಧತಿಯ ಬಗ್ಗೆ ಮಾಹಿತಿ, ಕೃಷಿಗೆ ಪೂರಕವಾದ ಹೈನುಗಾರಿಕೆ ಕೋಳಿ ಸಾಕಣೆ, ನವೀನ ಪದ್ಧತಿಯಲ್ಲಿ ಹಂದಿ ಸಾಕಣೆ, ಅಣಬೆ ಬೆಳೆಸುವಿಕೆ, ಎರೆಗೊಬ್ಬರದ ತಯಾರಿ ಇವುಗಳ ಬಗ್ಗೆ ಮಾರ್ಗದರ್ಶನಗಳನ್ನು ಕೊಡುವಂತಾಗಬೇಕು. ಹಾಗೆಯೇ ಹನಿ ನೀರಾವರಿ ಅಂದರೆ ಕಡಿಮೆ ನೀರು ಬಳಸಿ ಅಧಿಕ ಇಳುವರಿಯ ಬಗ್ಗೆ ಮಾಹಿತಿ, ರೈತರಿಗೆ ದೊರಕುವ ಸರ್ಕಾರಿ ಸೌಲಭ್ಯಗಳ ಬಗ್ಗೆ ವಿವರಣೆಯನ್ನು ಕೊಡುವಂತಾಗಬೇಕು. ಅಲ್ಲದೆಯೇ ಕೃಷಿ ಮಾಹಿತಿ ಪತ್ರಿಕೆಗಳು ಹಾಗೂ ದಿನಪತ್ರಿಕೆಗಳು ಬಡ ರೈತರ ಕೈ ಸೇರುವಂತಾಗಬೇಕು. ಹಾಗಾದರೆ ಮಾತ್ರ ಕೃಷಿ ಕ್ಷೇತ್ರದಲ್ಲಿ ನಮ್ಮ ಬಡ ರೈತರು ಪ್ರಗತಿಯಾಗಲು ಸಾಧ್ಯ.

**ಔದ್ಯೋಗಿಕ ರಂಗ :** ಔದ್ಯೋಗಿಕ ರಂಗದಲ್ಲಿ ನೋಡುವುದಾದರೆ ನಮ್ಮಲ್ಲಿ ಹೆಚ್ಚಿನ ಕೃಷಿಕರ ಮಕ್ಕಳು ಹತ್ತನೆಯ ತರಗತಿ ಪಾಸು ಮಾಡಿಕೊಂಡು ಆರ್ಮಿ ಹಾಗೂ ಪೋಲೀಸ್ ಕೆಲಸಗಳಿಗೆ ಮಾತ್ರ ಪ್ರಯತ್ನ ಮಾಡುತ್ತಲೇ, ಮನೆಯಲ್ಲೇ ಕಾಲಹರಣ ಮಾಡುತ್ತಾರೆ. ನಮ್ಮ ಹೆಣ್ಣುಮಕ್ಕಳ ಬಗ್ಗೆ ಹೇಳುವುದಾದರೆ ಹೆಚ್ಚಿನವರು ನರ್ಸ್ ಹುದ್ದೆಗೆ ಕಾಯುತ್ತಿರುತ್ತಾರೆ.

ಆದುದರಿಂದ ನಮ್ಮ ಜನಾಂಗದ ಯುವಕ ಯುವತಿಯರು ವಿದ್ಯಾಭ್ಯಾಸವನ್ನು ಮುಂದುವರಿಸುವ ಮೂಲಕ ಎಲ್ಲಾ ಕ್ಷೇತ್ರಗಲ್ಲೂ ಸೇವೆ ಮಾಡುವುದರೊಂದಿಗೆ, ಐ.ಎ.ಎಸ್., ಐ.ಪಿ ಎಸ್. ಅಥವಾ ಡಾಕ್ಟರ್, ಇಂಜಿನೀಯರ್‌ಗಳಂತಹ ದೊಡ್ಡ ಹುದ್ದೆಗಳನ್ನು ಅಲಂಕರಿಸುವುದರೊಂದಿಗೆ ನಮ್ಮ ಜನಾಂಗದ ಕೀರ್ತಿಯನ್ನು ದೇಶದೆಲ್ಲೆಡೆ ಹಬ್ಬಿಸಬೇಕಾಗಿರುವುದು ಇಂದು ಅನಿವಾರ್ಯವಾಗಿದೆ.

**ವಾಣಿಜ್ಯ ರಂಗ :** ವಾಣಿಜ್ಯ ರಂಗದಲ್ಲಿ ನಮ್ಮ ಜನಾಂಗವನ್ನು ಹುಡುಕಿದರೆ ಅಲ್ಲೊಬ್ಬ ಇಲ್ಲೊಬ್ಬ ಕಾಣಸಿಗುತ್ತಾರಷ್ಟೆ. ನಮ್ಮ ಜನಾಂಗದವರು ವ್ಯಾಪಾರ ಮಾಡಬಾರದೆಂಬ ಕಟ್ಟುಪಾಡು ಇದೆಯೇ ? ಇಲ್ಲ, ಮತ್ತೇಕೆ ವ್ಯಾಪಾರ ಮಾಡಬಾರದು ಅನುಭವವಿಲ್ಲವೇ ? ಇದೆ ಬರುತ್ತದೆ. ಆದರೆ ವ್ಯಾಪಾರ ಅಥವಾ ವಾಣಿಜ್ಯ ಕ್ಷೇತ್ರದಲ್ಲಿ ತನ್ನನ್ನು ತೊಡಗಿಸಿಕೊಂಡಾಗ ಮಾತ್ರ. ಆದುದರಿಂದ ಈಗಿನ ಆಧುನಿಕ ಯುಗದಲ್ಲಿ ಅಂದರೆ ವಾಣಿಜ್ಯ ಯುಗದಲ್ಲಿ ನಮ್ಮ ಜನಾಂಗದವರು ವಾಣಿಜ್ಯ ಕ್ಷೇತ್ರದಲ್ಲಿ ತಮ್ಮನ್ನು ತೊಡಗಿಸಿಕೊಂಡು ತನ್ನ ಅಹಂಭಾವ, ದೊಡ್ಡಸ್ತಿಕೆ, ಕೀಳರಿಮೆ, ಸೋಮಾರಿತನ, ನಿಶಾ ಸೇವನೆ ಇತ್ಯಾದಿ ಬಿಟ್ಟು ಸುಲಭದಲ್ಲಿ ಮುಂದುವರಿಯಬಹುದಾಗಿದೆ. ಹೇಗೂ ಗೌಡ ಶ್ರಮಿಕ ತಾನೆ ?

ಹಾಗೆಯೇ ಈಗಿನ ಮದುವೆ ಸಮಾರಂಭಗಳು ಬಹಳ ರೀತಿಯಲ್ಲೇ ನಡೆಯುತ್ತವೆ. ಅಂದರೆ ಹೆಂಡವಿಲ್ಲದೆ ಮದುವೆಯಿಲ್ಲದಂತಾಗಿದೆ. ಈ ರೀತಿ ಮದುವೆ ಸಮಾರಂಭಗಳಲ್ಲಿ ಅತಿಥಿಗಳಿಗೆ ಹೆಂಡದ ಸತ್ಕಾರ ಮಾಡುವುದರಿಂದ, ಚಿಕ್ಕ ವಯಸ್ಸಿನ ಮಕ್ಕಳಿಂದ ಹಿಡಿದು ಮುದುಕರವರೆಗೆ ಎಲ್ಲರೂ ಹೆಂಡದ ದಾಸ್ಯರಾಗುವುದರಲ್ಲಿ ಸಂಶಯವೇ ಇಲ್ಲ. ಆದುದರಿಂದ ಮದುವೆಗಳಲ್ಲಿ ಹೆಂಡ, ಸರಾಯಿ ಸತ್ಕಾರ ನಿಲ್ಲಬೇಕು. ನಮ್ಮ ಜೀವನದಲ್ಲಿ ಒಳ್ಳೆಯ ನಡವಳಿಕೆಯನ್ನು ರೂಢಿಸಿಕೊಳ್ಳಬೇಕು.

ಆದುದರಿಂದ, ನಮ್ಮ ಜನಾಂಗದವರು ಆತ್ಮವಿಶ್ವಾಸ, ಕರ್ತವ್ಯನಿಷ್ಠೆ, ಸಮಯಪ್ರಜ್ಞೆ ಒಳ್ಳೆಯ ಹವ್ಯಾಸಗಳನ್ನು ಬೆಳೆಸಿಕೊಳ್ಳುವುದರ ಮೂಲಕ ಜೀವನದಲ್ಲಿ ಎಲ್ಲಾ ಕ್ಷೇತ್ರಗಳಲ್ಲಿಯೂ ಸಾಧನೆಗೈಯುವುದರೊಂದಿಗೆ ನಮ್ಮ ಜನಾಂಗದ ಕೀರ್ತಿಯನ್ನು ಎಲ್ಲೆಡೆ ಹಬ್ಬಿಸುವುದು ಮುಖ್ಯವಾಗಿದೆ. ಅದನ್ನೆಲ್ಲಾ ಆ ನಮ್ಮ ಶ್ರೀ ವೆಂಕಟೇಶ ಕರುಣಿಸಲಿ ಎಂದು ಬೇಡಿಕೊಳ್ಳುತ್ತೇನೆ.

● ಕೋಟಿಮನೆ ಮನೋಹರ ಶಿವಯ್ಯ ಮದೆನಾಡು.

# ಒಕ್ಕಲಿಗರು : ಪುರಾಣದಿಂದ ಪರಿಷತ್ ನಿಘಂಟಿನವರೆಗೆ

(ಕಳೆದ ಸಂಚಿಕೆಯಿಂದ)

ಈತನಿಗೆ ಜಮೀನಿನ ರೂಪದಲ್ಲಿ,ಧಾನ್ಯದ ಉತ್ಪಾದನೆಯ ರೂಪದಲ್ಲಿ ಸರ್ಕಾರದಿಂದ ಪ್ರತಿಫಲ ಲಭಿಸುತ್ತಿತ್ತು. ಗೌಡನಿಗೆ ಸಹಾಯಕನಾಗಿ ಲೆಕ್ಕಪತ್ರಗಳನ್ನಿಡುವ ಕರಣಿಕನಿದ್ದನು. ಗ್ರಾಮದ ಆಡಳಿತಕ್ಕಾಗಿ ಗೌಡನ ನೇತೃತ್ವದಲ್ಲಿ ಸಭೆ ರಚಿತವಾಗುತ್ತಿತ್ತು. ಹಳ್ಳಿಯ ಎಲ್ಲ ಮನೆಗಳಿಂದಲೂ ಒಬ್ಬೊಬ್ಬ ಮುಖಂಡ ಇದರ ಸದಸ್ಯನಾಗಿರುತ್ತಿದ್ದ.

ಗಾವುಣ್ಣರ ನೇಮಕಾತಿ ಬಗ್ಗೆ ಕ್ರಿಸ್ತಶಕ 1050ರ ಧಾರವಾಡದ ಹಾನಗಲ್ಲಿನ ಶಾಸನ ವಿವರಣೆ ನೀಡುತ್ತದೆ. ಇದನ್ನು ಪರಿಶೀಲಿಸಿದ ಮೊರೇಸರು, 'ನೆರೆಹೊರೆಯ ಮಹಾಜನರ ಸಮ್ಮುಖದಲ್ಲಿ ಗಾವುಣ್ಣರ ನೇಮಕಾತಿ ನಡೆಯುತ್ತಿತ್ತು', ಎಂದು ಹೇಳಿದ್ದಾರೆ. ಊರಿನಿಂದ ರಾಜನಿಗೆ ಸಲ್ಲಬೇಕಾದ ಆದಾಯ ಸಂಗ್ರಹಿಸುವ ಕೆಲಸದೊಂದಿಗೇ ಊರಿನ ಕ್ಷೇಮ ಸಮಾಚಾರ ನೋಡಿಕೊಳ್ಳುವ ಕೆಲಸ ಗಾವುಣ್ಣದಾಗಿರುತ್ತಿತ್ತು. ಇದರಿಂದಾಗಿ ಪ್ರಭುಗಾವುಣ್ಣ, ಪ್ರಭು, ಪೆರ್ಗಡೆ, ನಾಯಕ ಪದಗಳು ಗಾವುಣ್ಣ ಪದಕ್ಕೆ ಸಂವಾದಿಯಾಗಿ ಶಾಸನಗಳಲ್ಲಿ ಬಳಕೆಯಾಗಿವೆ.

ಗಾವುಣ್ಣ ವೃತ್ತಿಯನ್ನು ಇಷ್ಟವಿಲ್ಲದಾಗ ಯೋಗ್ಯನಿಗೆ ಮಾರಲೂ ಸಾಧ್ಯವಿತ್ತು. ಅನುವಂಶಿಕ ವೃತ್ತಿ, ಅದನ್ನು ಮಾರುವ ಸಾಧ್ಯತೆ, ಆಗಾಗ ಹೊಸ ಗಾವುಣ್ಣರ ನೇಮಕ ಇವುಗಳಿಂದಾಗಿ ಗಾವುಣ್ಣರ ಸಂಖ್ಯೆ ಹೆಚ್ಚಿತು. ಒಂದು ಕಾಲದಲ್ಲಿ ಗಾವುಣ್ಣ ವೃತ್ತಿಯಲ್ಲಿದ್ದು ಅನಂತರ ಅದು ಕೈತಪ್ಪಿ ಹೋದರೂ ಜನ ಅವರನ್ನು ಗಾವುಣ್ಣರೆಂದೇ ಗುರುತಿಸುತ್ತಿದ್ದಿರಬೇಕು. ಕ್ರಿಸ್ತಶಕ 1278ರ ತುಮಕೂರು ಗಡಿಹಳ್ಳಿ ಶಾಸನಗಳಲ್ಲಿರುವ ಸಮಸ್ತ ಪ್ರಜೆಗವುಡ ಪ್ರಯೋಗದಲ್ಲಿ ಸಾವಕ್ಕಿಂತ ಹೆಚ್ಚಾಗಿ ವರ್ಗ ಸೂಚನೆ ಇದೆ.

ಕ್ರಿಸ್ತಶಕ 1436ರ ಮುದಗಲ್ಲಿನ ಶಾಸನದಲ್ಲಿ ಗ್ರಾಮಾನುಗ್ರಾಮದ ಗೌಡಪ್ರಜೆಗಳು ಪ್ರಯೋಗವಿದೆ. ಈ ಶಾಸನದಲ್ಲಿ ಗೌಡರೇ ಪ್ರಭುಗಳಾಗಿದ್ದರೋ, ಗೌಡರು-ಪ್ರಜೆಗಳು ಎಂಬರ್ಥವಿದೆಯೋ ತಿಳಿಯುವುದಿಲ್ಲ. ಈ ಗೊಂದಲ 14, 15ನೇ ಶತಮಾನಗಳ ಗುಣಲಕ್ಷಣ. ಹೊಂಗನ್ನಿ ಶಾಸನದ ಹಳ್ಳಿ ಗ್ರಾಮದ ಸಮಸ್ತಗವುಡುಗಳು ಪ್ರಯೋಗದಲ್ಲಿ ಗವುಡು ಪದ ವೃತ್ತಿ ಸೂಚಕವಲ್ಲ. ಹೀಗಿರುವುದರಿಂದಲೇ 16ನೇ ಶತಮಾನದ ಶಾಸನಗಳಲ್ಲಿ ಗವುಡರೇ ಗವುಡಿಕೆ ವೃತ್ತಿಸ್ವೀಕರಿಸುವ ಅಂಶ ಕಾಣಿಸುತ್ತದೆ.

ವಿದ್ವಾಂಸರ ಅಭಿಪ್ರಾಯ ಹಾಗೂ ಶಾಸನಗಳ ಪರಿಶೀಲನೆಯಿಂದ ಕೆಳಗಿನ ತೀರ್ಮಾನ ಸಾಧ್ಯ.

○ ಗೌಡಪದದ ಮೂಲಾರ್ಥ ಗ್ರಾಮದ ಅಧಿಕಾರಿ ಎಂದು. ಇಂದಿಗೂ ಗ್ರಾಮಗಾವುಡ, ಊರಗೌಡ ಪ್ರಯೋಗಗಳಲ್ಲಿ ಇದೇ ಅರ್ಥವಿದ್ದರೂ ಒಟ್ಟಾರೆ ಇದು ಜಾತಿ ಸೂಚಕ.

○ ಎಂಟು, ಒಂಬತ್ತನೇ ಶತಮಾನದಲ್ಲಿ ಸ್ಪಷ್ಟವಾಗಿ ವೃತ್ತಿ, ಸ್ಥಾನಮಾನ ಸೂಚಕ. ಗಾವುಣ್ಣ ಪದ 13ನೇ ಶತಮಾನದ ಕೊನೇ ಭಾಗದಲ್ಲಿ ಸಮಸ್ತ ಪ್ರಜೆಗಳಿಗೆ ಅನ್ವಯಿಸುವ ವಿಶಾಲಾರ್ಥ ಪಡೆದಿದೆ.

ಕರ್ನಾಟಕದ ಪ್ರಥಮ ಸಾಮ್ರಾಟರಾದ ಗಂಗರ ಕಾಲದಿಂದ ಉಪಲಬ್ಧವಿರುವ ಶಾಸನಗಳಲ್ಲಿ ಗೌಡ ಪದಬಳಕೆ ಅಪಾರ. ನಮಗೆ ಸಿಗುವ ಪ್ರಥಮ ಉಲ್ಲೇಖ ಕ್ರಿಸ್ತಶಕ 725ರ ಧಾರವಾಡದ ಶಿರಹಟ್ಟಿ ತಾಲ್ಲೂಕಿನ ಲಕ್ಷ್ಮೇಶ್ವರ ಶಾಸನದಲ್ಲಿ. ಇದರಲ್ಲಿ ನಾಡಗಾಮುಂಡ ಪದ ಪ್ರಯೋಗವಿದೆ. ಗ್ರಾಮಕ್ಕೆ ಮುಖ್ಯಸ್ಥನನ್ನು ನೇಮಿಸಿ ಊರೊಡೆಯ, ಗ್ರಾಮಮುಖಂಡ, ನಾಡಗಾಮುಂಡ, ಊರಗವುಡ ಹೆಸರುಗಳಿಂದಕರೆಯುತ್ತಿದ್ದರೆಂದು ಶಾಸನಗಳಿಂದ ವ್ಯಕ್ತ.

ಹೀಗೆಯೇ ಗಂಗಡಿಗಾರ, ಮೊರಸು, ಕುಂಚಟಿಗ, ನಾಮಧಾರಿ, ಕೊಡಗು, ದಾಸ ಮುಂತಾಗಿ 86ಕ್ಕೂ ಹೆಚ್ಚು ಒಕ್ಕಲಿಗ ಒಳಪಂಗಡಗಳನ್ನು ಗುರುತಿಸಲಾಗಿದೆ. ಒಕ್ಕಲಿಗರು ಆದಿಕಾಲದಿಂದ ವ್ಯವಸಾಯವನ್ನೆ ಕುಲಕಸುಬಾಗಿ ಅನುಸರಿಸಿಕೊಂಡು ಬಂದಿದ್ದಾರೆ, ಶ್ರೀ ಆದಿಚುಂಚನಗಿರಿ ಮಠ ಪ್ರಧಾನವಾಗಿ ಒಕ್ಕಲಿಗ ಗುರುಪೀಠವಾಗಿದ್ದರೂ ಇತರ ಜಾತಿ, ವರ್ಗದ ಜನರೂ ಇದರ ವ್ಯಾಪ್ತಿಯಲ್ಲಿದ್ದಾರೆ.

ಕರ್ನಾಟಕದಲ್ಲಿ ರಾಷ್ಟ್ರಕೂಟರು ಕ್ರಿಸ್ತಶಕ 7ರಿಂದ 14ನೇ ಶತಮಾನದವರೆಗೆ ವೈಭವದಿಂದ ರಾಜ್ಯವನ್ನಾಳಿದರು. ಒಕ್ಕಲಿಗ ಗೌಡರಾಗಿದ್ದ ಇವರ ರಾಜಚಿನ್ಹೆ ನೇಗಿಲಾಗಿತ್ತು. ಕಾವೇರಿಯಿಂದ ನರ್ಮದಾ ನದಿವರೆಗಿನ ವಿಶಾಲ ರಾಜ್ಯಕ್ಕೆ ಸಾಮ್ರಾಟರಾಗಿದ್ದರಲ್ಲದೆ, ಹಿಮಾಲಯ ತಪ್ಪಲಿನವರೆಗೂ ಪ್ರಭಾವ ಬೀರಿದ್ದರು.

ಮುಖ್ಯವಾಗಿ ಶೈವ, ವೈಷ್ಣವ ಧರ್ಮಕ್ಕೆ ಸೇರಿದ ಒಕ್ಕಲಿಗರು ಹೆಸರಿನ ಮುಂದೆ ಗೌಡ ಎಂದು ಸೇರಿಸಿಕೊಳ್ಳುತ್ತಾರೆ. ಈಚೆಗೆ ಮಾರ್ಪಾಟಾಗಿದೆ. ಶೈವರು ಹಣೆಗೆ ವಿಭೂತಿಧಾರಣೆ ಮಾಡಿದರೆ ವೈಷ್ಣವ ಸಂಪ್ರದಾಯದವರು ಕುಂಕುಮದ ನೆಟ್ಟನೆಯ ಗೀಟು ಹಾಕಿಕೊಳ್ಳುತ್ತಾರೆ. ●

# ಪೇಚಿಗೆ ಬಿದ್ದ ಅತಿಥಿ

ಒಂದು ಊರಿನಲ್ಲಿ ಇಬ್ಬರು ಬ್ರಾಹ್ಮಣ ದಂಪತಿಗಳಿದ್ದರು. ಅವರಲ್ಲಿ ಗಂಡನ ಹೆಸರು "ತುಪ್ಪ" ಹೆಂಡತಿಯ ಹೆಸರು "ಪಾಯಸ". ಅವರು ದಾನ ಧರ್ಮ ಮಾಡುವುದರಲ್ಲಿ ಧಾರಾಳ ಮನಸ್ಸಿನವರಾಗಿದ್ದರು. ಅವರು ಒಂದು ಜೊತೆ ಎತ್ತುಗಳನ್ನು ಸಾಕಿದ್ದರು. ಅದಕ್ಕೆ "ನೆಂಟ" ಮತ್ತು "ದೊಣ್ಣೆ" ಎಂದು ಹೆಸರಿಟ್ಟಿದ್ದರು. ಬೆಕ್ಕು ಮತ್ತು ನಾಯಿಗಳನ್ನೂ ಸಾಕಿದರು. ಬೆಕ್ಕಿಗೆ "ಕಂಡೇ" ಎಂದು, ನಾಯಿಗೆ "ಅಡ್ಡಗಟ್ಟು" ಎಂದು ಹೆಸರಿಟ್ಟಿದ್ದರು. ಹೀಗಿರುವಾಗ ಒಂದು ದಿನ ಎರಡು ಎತ್ತುಗಳು ಮೇಯಲು ಹೋದವು, ಸಾಯಂಕಾಲವಾದರೂ ಎತ್ತುಗಳು ಮನೆಗೆ ಬಾರದಿರಲು ತುಪ್ಪನು ಹುಡುಕಿಕೊಂಡು ಹೊರಟನು. ಊರಿನ ಪಕ್ಕದ ಕೆರೆಯ ಮಾರ್ಗವಾಗಿ ಇನ್ನೊಬ್ಬ ಅಪರಿಚಿತ ವ್ಯಕ್ತಿ ಪಕ್ಕದ ಊರಿಗೆ ಹೋಗುತ್ತಿದ್ದನು. ಆಗ ಅವನು ತುಪ್ಪನನ್ನು ಕಂಡು ಈ ರೀತಿ ಹೇಳಿದ, "ನಾನು ಪಕ್ಕದ ಊರಿಗೆ ಹೋಗಬೇಕಾಗಿದೆ. ಅಲ್ಲಿಗೆ ಹೋಗಲು ಬಹಳ ಕತ್ತಲಾಗುತ್ತದೆ, ನಿಮ್ಮ ಮನೆಯಲ್ಲಿ ಸ್ವಲ್ಪ ಜಾಗ ಕೊಟ್ಟರೆ ರಾತ್ರಿ ಮಲಗಿದ್ದು ಬೆಳಿಗ್ಗೆ ಹೋಗುವುದಾಗಿ ತಿಳಿಸಿದನು. ಅದಕ್ಕೆ ತುಪ್ಪನು "ನಮ್ಮ ಮನೆಯಲ್ಲಿ ರಾತ್ರಿ ವಿಶ್ರಮಿಸಿ ಬೆಳಿಗ್ಗೆ ಹೋಗುವಿರಂತೆ ನಾನು ಬರುವುದು ಸ್ವಲ್ಪ ತಡವಾಗುತ್ತದೆ. ನೀವು ಈ ದಾರಿಯಲ್ಲಿ ಹೋಗಿ ಎಡಕ್ಕೆ ತಿರುಗಿದರೆ ಸಿಗುವ ಮೊದಲನೆಯ ಮನೆಯೇ ನಮ್ಮದು. ಅಲ್ಲಿಗೆ ಹೋಗಿ, ಪಾಯಸ ಇದ್ದಾಳೆ ಎಂದನು. ಅವನ ಮಾತನ್ನು ಕೇಳಿದ ಅತಿಥಿಯು ಮಲಗಲು ಜಾಗ ಸಿಗುವುದೋ ಇಲ್ಲವೋ ಎಂದಿದ್ದೆ. ಮಲಗಲು ಜಾಗವು ಸಿಕ್ಕ ಜೊತೆಗೆ ಪಾಯಸವೂ ಸಿಗುವುದು, ಹಾಯಾಗಿ ಮಲಗೋಣವೆಂದು ಮನಸ್ಸಿನಲ್ಲಿ ಅಂದುಕೊಂಡು ಮನೆಗೆ ಹೋಗಿ ತುಪ್ಪನ ಹೆಂಡತಿಯ ಜೊತೆ ವಿಷಯವನ್ನು ತಿಳಿಸಿದನು. ಆಗ ಪಾಯಸಳು ಸಂತೋಷಪಟ್ಟುಕೊಂಡು, ಅವರಿಗೆ ಚಾಪೆಹಾಸಿ ಕುಳ್ಳಿರಿಸಿ ತಾನು ಅಡಿಗೆ ಸಿದ್ಧಪಡಿಸಿದಳು. ಆಮೇಲೆ ಅತಿಥಿಯನ್ನು ಕುರಿತು" ಈಗಲೇ ಊಟಮಾಡುತ್ತೀರೋ ಜೊತೆಗೆ ತುಪ್ಪವು ಬರಲೋ" ಎಂದಳು. ಅದಕ್ಕೆ ಅತಿಥಿಯು ಮನಸ್ಸಿನಲ್ಲಿ ಪಾಯಸದ ಜೊತೆಗೆ ತುಪ್ಪವು ಸಿಕ್ಕಿದರೆ ಪರವಾಗಿಲ್ಲ, ತರಲು ಅಂಗಡಿಗೆ ಕಳುಹಿಸಿರಬಹುದು ಎಂದುಕೊಂಡು ಅವಳನ್ನುಕುರಿತು "ತುಪ್ಪಇಲ್ಲದೆ ಹೇಗೆ ಮಾಡುವುದು ತುಪ್ಪವು ಬರಲಿ" ಎಂದನು. ಅಷ್ಟರಲ್ಲಿ ತೂಕಡಿಕೆ ಬಂದಂತಾಗಿ ಕಣ್ಣು ಮುಚ್ಚಿ ಮಲಗಿದ. ಅಷ್ಟರಲ್ಲಿ ತುಪ್ಪನಿಗೆ 'ನೆಂಟ' ಎಂಬ ಎತ್ತುಸಿಕ್ಕಿತು. ಅದನ್ನು ಹೊಡೆದುಕೊಂಡು ಬಂದು ಮನೆಯ ಅಂಗಳದಲ್ಲಿ ನಿಂತು ಹೆಂಡತಿಯನ್ನು "ಲೇ ಈ ನೆಂಟನನ್ನು ಕಟ್ಟಿಹಾಕು ದೊಣ್ಣೆಯನ್ನು ತರುತ್ತೇನೆ ಎಂದನು. ಈ ಮಾತನ್ನು ಮಲಗಿದ್ದ ಅತಿಥಿಯು ಕೇಳಿಕೊಂಡು ಎದ್ದು ಕುಳಿತನು. ಇವರು ತನ್ನನ್ನು ಕಟ್ಟಿಹಾಕಿ ಹೊಡೆಯುವರೆಂದು ಭಾವಿಸಿ ಓಡಿಹೋಗಿ ನಡುಮನೆಯ ಪೆಟ್ಟಿಗೆಯ ಕೆಳಗೆ ಅವಿತುಕೊಂಡನು. ಅಷ್ಟರಲ್ಲಿ ತುಪ್ಪನಿಗೆ 'ದೊಣ್ಣೆ' ಎಂಬ ಎತ್ತು ಸಿಕ್ಕಿತು. ಅದನ್ನು ಕಟ್ಟಿ ಹಾಕಿ ತಾನು ಸ್ನಾನ ಮಾಡಿ ದೇವರ ಪೂಜೆಯನ್ನು ಮುಗಿಸಿ ಅತಿಥಿಯನ್ನು ಊಟಕ್ಕೆ ಕರೆಯಲು ಬಂದು ನೋಡಿದರೆ ಅತಿಥಿ ಕಾಣಿಸಲಿಲ್ಲ. ನಡುಮನೆ ಹುಡುಕಾಡಿ ಬೇಜಾರುಪಟ್ಟುಕೊಂಡು ಬೆಕ್ಕು ಮತ್ತು ನಾಯಿಗೆ ಊಟವನ್ನು ಹಾಕಲು ನಡುಮನೆಯಲ್ಲಿದ್ದ ಬೆಕ್ಕನ್ನು ಕುರಿತು "ಕಂಡೇ ಕಂಡೇ" ಎಂದು ಕೂಗಿದನು. ಇದನ್ನು ಕೇಳಿದ ತಕ್ಷಣ ಅತಿಥಿ ನನ್ನನ್ನು ಕಂಡುಕೊಂಡರೆಂದು ತಿಳಿದು ಅಲ್ಲಿಂದ ತಪ್ಪಿಸಿಕೊಂಡು ಹಿಂದಿನ ಬಾಗಿಲಿನಿಂದ ಹೊರಗೆ ಹೋದನು. ಬೆಕ್ಕಿಗೆ ಊಟವನ್ನು ಹಾಕಿ ನಾಯಿಗೆ ಊಟ ಹಾಕಲು ಬಾಗಿಲ ಬಳಿ ಬಂದು ನಾಯಿಯನ್ನು ಕಂಡು 'ಅಡ್ಡಗಟ್ಟು ಅಡ್ಡಗಟ್ಟು' ಎಂದು ಕೂಗಿದನು. ಇದನ್ನು ಕೇಳಿಸಿಕೊಂಡ ಅತಿಥಿಗೆ ನನ್ನನ್ನು ಅಡ್ಡಗಟ್ಟಿ ಹಿಡಿಯುವರೆಂದು ಬಿದ್ದೆನೋ ಎದ್ದೆನೋ ಎಂದು ಅಲ್ಲಿಂದ ಓಡಿ ಹೋದನು.

ಹೀಗೆ ಪಾಯಸದ ಜೊತೆಗೆ ತುಪ್ಪವನ್ನು ಬಯಸಿದ ಅತಿಥಿ ಪೇಚಿಗೆ ಸಿಕ್ಕಿಕೊಂಡನು.

● ಚೈತ್ರ

# ಪ್ರೀತಿ

ಜೀವಿಗಳು ಹುಟ್ಟುತ್ತವೆ, ಬೆಳೆಯುತ್ತವೆ, ಸಾಯುತ್ತವೆ. ಹುಟ್ಟಿದರಕ್ಕೆ ಸಾವು ತಪ್ಪಿದ್ದಲ್ಲ. ಹುಟ್ಟಿದಂದೇ ಸಾವೂ ಬಂತು. ಇದು ಜೀವನದ ಸತ್ಯ ಮತ್ತು ಸತ್ವ. ಹುಟ್ಟಿದವನು ಸಾಯುವುದು ನಿಶ್ಚಿತ ಎಂದಾದರೆ ಏಕೆ ಹುಟ್ಟಬೇಕು ? ಹುಟ್ಟುವುದು ಕರ್ಮಫಲ, ಕರ್ಮಕ್ಕಾಗಿ ಹುಟ್ಟಬೇಕು. ಕರ್ಮವನ್ನು ಮಾಡಬೇಕು. ಅದನ್ನು ವೃದ್ಧಿಪಡಿಸಬೇಕು. ಮುಂದಿನ ಸಂತಾನಕ್ಕೆ ದಾರಿದೀಪ ಆಗಬೇಕು. ಇದು ಸಾಧಿಸಬೇಕಾದರೆ ಪ್ರೀತಿ ಮುಖ್ಯ. ಪ್ರೀತಿ ಕಾಣಲು ಸಿಕ್ಕುವುದಿಲ್ಲ. ಅನುಭವಿಸಬಹುದು. ಪ್ರೀತಿಗೆ ಒಂದು ಆಕಾರಬೇಕು. ಅದೇ ಮನುಷ್ಯಾಕಾರ. ಮನುಷ್ಯನನ್ನು ಅಥವಾ ಜೀವಿಯನ್ನು ಕಾಣುತ್ತೇವೆ. ಅವನು ತೋರುವ ಪ್ರೀತಿಯ ಮೇಲೆ ಅವನನ್ನು ಹಚ್ಚಿಕೊಳ್ಳುತ್ತೇವೆ. ಹೂವು ಕಾಣುತ್ತದೆ. ಆದರೆ ಅದರ ಸುವಾಸನೆ ಕಾಣದು. ಆದರೆ ಸುವಾಸನೆಯಿಂದ ಹೂವನ್ನು ಗುರ್ತಿಸಬಹುದು. ಆದರೆ ಸುವಾಸನೆಯನ್ನು ಹೂವಿನಿಂದ ಬೇರ್ಪಡಿಸಲಾಗದು. ಹಾಗೆಯೇ ಪ್ರೀತಿಯನ್ನು ಮನುಷ್ಯನಿಂದ ಬೇರ್ಪಡಿಸಲಾಗದು. ಪ್ರೀತಿಯೇ ಮನುಷ್ಯ, ಮನುಷ್ಯನೇ ಪ್ರೀತಿ. ಸಹವಾಸದಲ್ಲಿ ಪ್ರೀತಿಯೂ ಇದೆ. ದೋಷವೂ ಇದೆ.

ಇಂದು ನಮ್ಮ ಮಕ್ಕಳನ್ನು ವಿದ್ಯಾವಂತರಾಗಲು ಕಾಲೇಜಿಗೆ ಕಳುಹಿಸುತ್ತೇವೆ. ಅಲ್ಲಿ ಗೂಡೆ ಮತ್ತು ಹೈದ ಬೆರೆಯುತ್ತಾರೆ ಪ್ರೀತಿ ಮೊಳಗಿತು ಎಂಬ ಭಾವನೆ ಬರುತ್ತದೆ. ಆ ಭಾವನೆಗೆ ಕಾರಣ ಅಜ್ಞಾನ. ಅಜ್ಞಾನಕ್ಕೆಕಾರಣ ವಯಸ್ಸು. ಗೂಡೆಗೆ ಎದೆ ಮುಂದೆ ಬರುವಷ್ಟರಲ್ಲಿ ನೆಲಕಾಣದಾಗುವುದು. ಹೈದನಿಗೆ ಮೀಸೆ ಬರುವಾಗ ಬುದ್ಧಿ ಮಾಯವಾಗುವುದು. ಇವುಗಳ ಜಂಜಾಟದಲ್ಲಿ ವಿದ್ಯೆ ಅವರನ್ನು ಬಿಟ್ಟೋಡುವುದು. ಹಾಗಾದರೆ ಪ್ರೀತಿ ಎಂಬುದು ಹಾಗೇ ? ಅಲ್ಲ ಅದೊಂದು ಪವಿತ್ರ ವರದಾನ. ಅದನ್ನು ನಾವು ಅರಿಯಬೇಕು ಅರಿತು ಜೀವಿಸಬೇಕು.

ಪ್ರೀತಿ ಎಂದರೇನು ?

1. ಗೂಡೇಗೂ ಹೈದನಿಗೂ ಪ್ರೀತಿಯೆಂದರೆ ಅದು ಮೋಹ, ಶಾಶ್ವತವಲ್ಲ. ವಯಸ್ಸಿನಲ್ಲಿ ಲೋಕಕಾಣದ ಹಾಗೆ ಆಡುವ ಚೆಲ್ಲಾಟ-ಮೋಹ.

2. ಪ್ರೀತಿ, ನಮಗೂ ನಮ್ಮಸ್ನೇಹಿತರಿಗೂ, ಇದು ಅನುರಾಗ. ಸಂದರ್ಭಕ್ಕೋಸ್ಕರ ಇದ್ದಷ್ಟು ದಿವಸ ಅನುರಾಗ.

3. ಪ್ರೀತಿ, ನನ್ನ ಮನೆ, ನನ್ನ ಆಸ್ತಿ, ನನ್ನದು ಎಂಬ ಬಯಕೆ. ಇದು ಇಚ್ಛಾ ಪ್ರೀತಿ.

4. ಪ್ರೀತಿ, ತಾಯಿ ಮತ್ತು ಮಗುವಿನ ಪ್ರೀತಿ ವಾತ್ಸಲ್ಯ. ಮಕ್ಕಳು ಬೆಳೆದ ಹಾಗೆ ಬದಲಾಗುವುದು. ಆದರೆ ತಾಯಿಗೆ ಮಕ್ಕಳ ಮೇಲೆ ಪ್ರೀತಿ ಉಸಿರಿರುವವರೆಗೆ.

5. ಪ್ರೀತಿ, ನಮಗೂ ದೇವರಿಗೂ-ಇದು ಭಕ್ತಿ. ಸದಾ ಇರುವುದು. ಶಾಶ್ವತವಾಗಿರುವುದು. ಸತ್ತನಂತರವೂ ಇರುವುದು.

ಪ್ರೀತಿ ಎಂದರೆ ನಮ್ಮೆದುರಿಗಿರುವುದು ಈ ರೀತಿ,

1. ಮೋಹ, 2. ಅನುರಾಗ, 3. ಇಚ್ಛೆ 4. ವಾತ್ಸಲ್ಯ ಮತ್ತು 5. ಭಕ್ತಿ

ಈ ಪ್ರೀತಿಯೆಲ್ಲಾ ಶಿವವಾಗಿರುವ ದೇಹ ಶವವಾಗುವವರೆಗೆ. ಶವವಾದ ಮೇಲೆ ಅದೇ ಪ್ರೀತಿ ದಯೆ ದಾಕ್ಷಿಣ್ಯವಿಲ್ಲದೆ ಪ್ರೀತಿಸಿದ ಶರೀರವನ್ನು ಮಣ್ಣು ಮಾಡುವುದು ಅಥವಾ ಬೂದಿ ಮಾಡುವುದು. ಭಕ್ತಿ ಎಂಬ ಪ್ರೀತಿ ಮಾತ್ರ ಸತ್ತ ಮೇಲೂ ನಮ್ಮನ್ನು ರಕ್ಷಿಸುವುದು.

ಇಂದು ತಂದೆ ತಾಯಂದಿರು ತಮ್ಮ ಮಕ್ಕಳಿಗೆ ಕಲಿಸಬೇಕಾದ ಮೊಟ್ಟಮೊದಲನೆಯ ಪಾಠ ದೇವರಲ್ಲಿ ಭಕ್ತಿ ಇಡುವುದು, ತಂದೆ ತಾಯಿಯರನ್ನು, ಹಿರಿಯರನ್ನು ಗೌರವಿಸುವುದು. ನಾವು ಕಾಲು ಮುಟ್ಟಿ ನೂರಾರು ಸಲ ನಮಸ್ಕರಿಸುವುದು ಬಹುದೊಡ್ಡ ಸಂಸ್ಕೃತಿ. ಇತರರಿಗೆ ಅನುರಾಗ ತೋರಿಸುವುದು, ಇವುಗಳನ್ನು ಮನೆಯಲ್ಲಿ ಕಡ್ಡಾಯವಾಗಿ ಕಲಿಸಲೇಬೇಕು. ಈ ಗುಣಗಳೇ ಅವರ ಜೀವನಕ್ಕೆ ರಕ್ಷೆ.

ಪ್ರೀತಿಯನ್ನು ತಿಳಿಯಿರಿ, ಪ್ರೀತಿ ಮಾಡಿರಿ, ಪ್ರೀತಿಯನ್ನು ಅನುಭವಿಸಿ. ದೇವರನ್ನು ಹುಡುಕಿಕೊಂಡು ಹೋಗುವುದು ಬೇಡ. ತಾಯಿಗಿಂತ ಮಿಗಿಲಾದ ದೇವರಿಲ್ಲ.

● ಸಿ. ಜಿ. ಮುತ್ತಪ್ಪ,
ನಿವೃತ್ತ ಕೃಷಿ ಇಂಜಿನಿಯರ್,
ಕುಶಾಲನಗರ.

**ಸೂಕ್ತಿ :-**

ನಿಮಗೆ ಸರಿಯಾಗಿ ಸಲಹೆ ನೀಡಬಲ್ಲ ದೊಡ್ಡ ಮನುಷ್ಯರು ನೀವೇ ಅಲ್ಲದೆ ಇನ್ನಾರೂ ಆಗಿರಲು ಸಾಧ್ಯವಿಲ್ಲ.

○ ಸಂಗ್ರಹ : ಬಬಿತಾ ರಾಮೇಗೌಡ

# ಅಭಿವೃದ್ಧಿ ಪಥದಲ್ಲಿ ಗೌಡ ಯುವ ಜನಾಂಗ

ಹೆಸರಾಂತ ಕವಿ, ಆಂಗ್ಲ ನಾಟಕಕಾರ ಷೇಕ್ಸ್‌ಪಿಯರ್‌ನ ಪ್ರಕಾರ ಪ್ರಪಂಚವೆಂಬ ವೇದಿಕೆಯಲ್ಲಿ ನಾವು ಬರೆ ಪಾತ್ರಧಾರಿಗಳು. ವೇದಿಕೆಯಮೇಲೆ ಬಂದು ನಮ್ಮ ಅಭಿನಯ ಮುಗಿದಾಗ ನಿರ್ಗಮಿಸಬೇಕು. ನಮಗೆ ದೊರೆತ ಪಾತ್ರವನ್ನು ಸಮರ್ಪಕವಾಗಿ ಅಭಿನಯಿಸಬೇಕು. ಆಗ ಎಲ್ಲರ ಮೆಚ್ಚುಗೆಗೂ ಪಾತ್ರರಾಗುತ್ತೇವೆ. ಪಾತ್ರ ನಿರ್ವಹಣೆಯನ್ನು ಪ್ರೇಕ್ಷಕರು ವಿಶ್ಲೇಷಿಸುವಂತೆ ನಮ್ಮ ನಿಜ ಜೀವನದಲ್ಲೂ ನಾವು ವಿಶ್ಲೇಷಣೆಗೆ ಒಳಗಾಗುತ್ತೇವೆ. ಆದುದರಿಂದ ಸಾಧ್ಯವಾದಷ್ಟು ಮಟ್ಟಿಗೆ ನಮ್ಮ ಪಾತ್ರವನ್ನು ಸಮರ್ಪಕವಾಗಿ ವಹಿಸುವುದು ನಮ್ಮ ಆದ್ಯ ಕರ್ತವ್ಯವಾಗಿರುತ್ತದೆ.

ಚೀನಾದಲ್ಲಿ ಹರಿಯುವ ಒಂದು ನದಿ ಹಿಂದೆ ಪ್ರತಿ ವರ್ಷವೂ ತನ್ನ ಪಾತ್ರವನ್ನು ಬದಲಾಯಿಸುತ್ತಾ ಅಲ್ಲಿಯ ಜನರಿಗೆ ಸಾಕಷ್ಟು ಕಷ್ಟ ನಷ್ಟಗಳನ್ನುಂಟು ಮಾಡಿ 'ಕಣ್ಣೀರಿನ ನದಿ' ಎಂದೇ ಕರೆಸಿಕೊಂಡಿತು. ಚೀನಾದ ಜನರು ಆ ನದಿಯ ನೀರನ್ನು ಬಳಸಿಕೊಳ್ಳಲಾಗಲಿಲ್ಲ. ಆಗುತ್ತಿದ್ದರೆ ಅದು ಅವರಿಗೆ ವರವಾಗುತ್ತಿತ್ತು. ದುರಾದೃಷ್ಟವಶಾತ್ ಅದು ಶಾಪವಾಗಿ ಕಾಡಿತು. ಅಂತೆಯೇ ನಮ್ಮ ಗೌಡ ಯುವ ಜನಾಂಗದ ಹೆಚ್ಚಿನವರು ತಮ್ಮಲ್ಲಿರುವ ಪ್ರತಿಭೆ, ಜ್ಞಾನ, ಬುದ್ಧಿವಂತಿಕೆಗಳನ್ನು ಸರಿಯಾದ ಪಾತ್ರದಲ್ಲಿ ಹರಿಯುವಂತೆ ಮಾಡದೆ, ಚೀನಾದ ಕಣ್ಣೀರಿನ ನದಿಯಂತೆ ಸಿಕ್ಕಿದಲ್ಲೆಲ್ಲಾ ಹರಿಯುವಂತೆ ಮಾಡಿ ನಮ್ಮ ಜನಾಂಗದ ಕಣ್ಣೀರಿಗೆ ಕಾರಣರಾಗಿದ್ದಾರೆ. ಗೌಡ ಜನಾಂಗದ ಯುವಕರು ಇತರ ಸಮಾಜಗಳ ಯುವಕರಷ್ಟೆ ಬುದ್ಧಿವಂತರೂ ಪ್ರತಿಭಾಶಾಲಿಗಳೂ ಆಗಿದ್ದಾರೆ. ಆದರೆ ತಮ್ಮ ಪ್ರತಿಭೆ ಹಾಗೂ ಬುದ್ಧಿವಂತಿಕೆಯನ್ನು ಸಮರ್ಪಕವಾಗಿ ಉಪಯೋಗಿಸಿಕೊಳ್ಳಲು ವಿಫಲರಾಗುತ್ತಿದ್ದಾರೆ. ಇದಕ್ಕೆ ಹಲವಾರು ಕಾರಣಗಳಿರಬಹುದು ಅವರಿಗೆ ಆರ್ಥಿಕ ಸಮಸ್ಯೆ ಇರಬಹುದು, ಇಲ್ಲವೆ ಸರಿಯಾದ ಮಾರ್ಗದರ್ಶನ ಇಲ್ಲದಿರಬಹುದು. ಅಥವಾ ತಮ್ಮ ಭವಿಷ್ಯದ ಬಗ್ಗೆ ಕಾಳಜಿಯಿಲ್ಲದಿರಬಹುದು. ಇಂತಹ ಯುವಕರಿಗೆ ಸರಿಯಾದ ಮಾರ್ಗದರ್ಶನದ ಅಗತ್ಯವಿದೆ.

ಈಗಿನ ಹೆಚ್ಚಿನ ಯುವಕರಿಗೆ ಹಿರಿಯರ ಹಿತವಚನಗಳು ಕಿವಿಗೆ ಕಾಯಿಸಿದ ಸೀಸ ಸುರಿದಂತೆ ಆಗುವುದು ಸಾಮಾನ್ಯ. ಆದುದರಿಂದ ಕಬ್ಬಿಣವು ಬೆಂಕಿಯಲ್ಲಿ ಕಾದು ಕೆಂಪಾದಾಗ ಬಡಿದು ಬೇಕಾದ ರೂಪಕ್ಕೆ ತರುವ ಕಮ್ಮಾರನಂತೆ ಪ್ರತಿಯೊಬ್ಬ ಹೆತ್ತವರೂ, ಶಿಕ್ಷಕರೂ ಸರಿಯಾದ ಸಮಯದಲ್ಲಿ ಮಕ್ಕಳನ್ನು ಬೇಕಾದ ರೀತಿಯಲ್ಲಿ ರೂಪಿಸುವುದು ತಮ್ಮ ಹಾಗೂ ಸಮಾಜದ ಹಿತದೃಷ್ಟಿಯಿಂದ ಅತೀ ಅಗತ್ಯವಾಗಿದೆ. ಆಧುನಿಕ ಸಮಾಜದಲ್ಲಿ ಯುವಕರು ದುಷ್ಟ ಹವ್ಯಾಸಗಳಿಗೆ ಬಲಿ ಬೀಳದಂತೆ ಎಚ್ಚರವಹಿಸಬೇಕು.

ನಮ್ಮ ಜನಾಂಗ ಇನ್ನೂ ಹಿಂದುಳಿದವರ ಪಟ್ಟಿಯಲ್ಲಿಯೇ ಸೇರಿರುತ್ತದೆ. ನಮ್ಮ ಯುವಕರು ಆರ್ಥಿಕವಾಗಿ, ಶೈಕ್ಷಣಿಕವಾಗಿ, ಸಾಮಾಜಿಕವಾಗಿ ಮುಂದುವರಿಯುವುದು ಅತೀ ಅಗತ್ಯವಾಗಿದೆ. ನಮ್ಮ ಯುವ ಜನಾಂಗ ಶೈಕ್ಷಣಿಕವಾಗಿ ಮುಂದುವರಿದರೆ, ಎಲ್ಲಾ ರೀತಿಯಲ್ಲೂ ಮುಂದುವರಿಯಲು ಸಾಧ್ಯವಿದೆ. ಆದುದರಿಂದ ಶಿಕ್ಷಣಕ್ಕೆ ಹೆಚ್ಚಿನ ಪ್ರಾಶಸ್ತ್ಯ ನೀಡಬೇಕು.

'ಆಧುನಿಕ ಸುಳ್ಯದ ಶಿಲ್ಪಿ' ಹಾಗೂ 'ಸುಳ್ಯದ ಬಿರ್ಲಾ' ಎಂದು ಕರೆಯಲ್ಪಟ್ಟ ಶ್ರೀ ಕುರುಂಜಿ ವೆಂಕಟರಮಣಗೌಡರು ಹಲವಾರು ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿದ್ದಾರೆ. ಆವರೆ ತಾಂತ್ರಿಕ ವಿದ್ಯಾಲಯ ಮತ್ತು ದಂತ ವೈದ್ಯಕೀಯ ವಿದ್ಯಾಲಯಗಳಲ್ಲಿ ನಮ್ಮ ಜನಾಂಗದ ವಿದ್ಯಾರ್ಥಿಗಳು ಬರೇ ಬೆರಳೆಣಿಕೆಯಷ್ಟು ಮಾತ್ರ. ಬಹುತೇಕವಾಗಿ ಬಿ.ಎ. ಮತ್ತು ಬಿ.ಕಾಂ. ಗಳಲ್ಲೇ ತೃಪ್ತಿ ಕಾಣುತ್ತಿದ್ದಾರೆ. ಈ ಕೋರ್ಸ್‌ಗಳಲ್ಲಿಯೂ ಮುಂದುವರಿದು ಸ್ನಾತಕೋತ್ತರ ಪದವಿಗಳನ್ನು ಪಡೆದು, ಸ್ಪರ್ಧಾತ್ಮಕ ಪರೀಕ್ಷೆಗಳನ್ನು ಎದುರಿಸಿ ಯಶಸ್ವಿಯಾಗಬಹುದು. ಉತ್ತಮ ಉದ್ಯೋಗಗವನ್ನು ಪಡೆಯಬಹುದು.

ಸಮಾಜದಲ್ಲಿ ಗೌರವಾನ್ವಿತರಾಗಿ, ಸುಖವಾಗಿ ಬಾಳಲು ಸರಕಾರಿ ಉದ್ಯೋಗವೊಂದೇ ದಾರಿಯಲ್ಲ. ಯಶಸ್ಸು ಕಾಣದವರು ತಮ್ಮ ಪ್ರತಿಭೆಗಳನ್ನು ವಿಕಸನ ಮಾಡಿಕೊಂಡು, ಬೇರೆ ಯಾವುದೇ ಉದ್ಯೋಗವನ್ನು ಅವಲಂಬಿಸಬಹುದು. "ಹುಟ್ಟಿಸಿದ ದೇವರು ಹುಲ್ಲು ಮೇಯಿಸುವುದಿಲ್ಲ" ಎಂದು ದೇವರನ್ನೇ ನಂಬಿಕೊಂಡು ಉಂಡಾಡಿಗಳಾಗಬಾರದು. ಎಲ್ಲಾ ಯುವ ಜನಾಂಗ ಜೀವನದಲ್ಲಿ ಒಂದು ಗುರಿಯನ್ನು ಹೊಂದಿದ್ದು, ಅದನ್ನು ಸಾಧಿಸಿ, ಯಶಸ್ವಿ ಜೀವನ ಸಾಗಿಸುವುದು ಅತೀ ಅಗತ್ಯವಾಗಿದೆ. ಯುವ ಜನಾಂಗ, ಹೆತ್ತವರ ಗಳಿಕೆಯನ್ನೇ ತಮ್ಮ ಬಂಡವಾಳವನ್ನಾಗಿಸಿಕೊಳ್ಳದೆ ತಮ್ಮದೇ ಕಾಲಲ್ಲಿ ನಿಲ್ಲುವ ಮನಸ್ಸು ಮಾಡಬೇಕು. ಸ್ವಂತಿಕೆಯನ್ನು ಬೆಳೆಸಿಕೊಂಡು ಉತ್ತಮ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಬೇಕು. ಹೀಗಾದಾಗ ಗೌಡ ಜನಾಂಗ ಮಾತ್ರವಲ್ಲದೆ ಸಮಾಜದ ಇತರ ಎಲ್ಲಾ ಜನಾಂಗಗಳ ಜನರ ಪ್ರೀತಿಗೂ ಪಾತ್ರರಾಗುವುದರಲ್ಲಿ ಸಂಶಯವಿಲ್ಲ.

ಇಂದು ಕೆಲವು ಯುವಕರು ನಿರೀಕ್ಷೆಗೂ ಮೀರಿ ಯಶಸ್ಸು ಸಾಧಿಸುತ್ತಿರುವುದು ಸಂತಸದ ವಿಷಯ. ಆದರೆ ಇನ್ನೂ ಎಷ್ಟೋ ಮಂದಿ ನೆಲೆಕಾಣದೆ ಅಲೆಯುತ್ತಿರುವುದು ಬೇಸರದ ಸಂಗತಿ. ಇಂತಹ ಯುವಕರಿಗೆ ಸೂಕ್ತ ಮಾರ್ಗದರ್ಶನವನ್ನು ನೀಡುವುದು ನಮ್ಮ ಹಿರಿಯರ ಮತ್ತು ಗೌಡ ಸಂಘಗಳ ಅಗತ್ಯ ಕರ್ತವ್ಯವಾಗಿದೆ. ನಮ್ಮ ಜನಾಂಗದ ಯುವಕ ಯುವತಿಯರು ಸಮಾಜದಲ್ಲಿ ಉತ್ತಮ ಸ್ಥಾನಮಾನಗಳಿಸುವ ಪ್ರಯತ್ನದಲ್ಲಿ ಸಫಲರಾಗಿ, ಇಡೀ ಜನಾಂಗವೆ ಸರ್ವತೋಮುಖ ಅಭಿವೃದ್ಧಿ ಪಥದತ್ತ ಮುನ್ನಡೆಯಲಿ.

**ಶ್ರೀಮತಿ ಕಮಲ ಬಾಲಚಂದ್ರ**
ಸುಳ್ಯ. ಕೃಪೆ : 'ವೀಳ್ಯ'

## ಕನ್ನಡದಲ್ಲಿ 'ಸರಿಗಮ ಪದನಿಸ'

**ಸ-** ಸರ್ವರೂ, ಸರ್ವ ವಿಧದಲ್ಲೂ ಸರಿಸಮಾನರು
**ರಿ-** ರೀತಿ ನೀತಿಗಳ ಜೀವನ ಸಜ್ಜನರ ಲಕ್ಷಣ
**ಗ-** ಗರ್ವವಿಲ್ಲದ ಬಾಳೇ ಬಲು ಸೊಗಸು
**ಮ-** ಮನಕಂಜಿ ನಡೆಯಬೇಕು, ಜನಕಂಜಬಾರದು
**ಪ-** ಪದವಿ, ಹಣ ಮುಖ್ಯವಲ್ಲ, ಗುಣಶೀಲಗಳು ಮುಖ್ಯ
**ದ-** ದಮನಿ ದಮನಿಗಳಲ್ಲಿ ನ್ಯಾಯ, ನೀತಿ, ಧರ್ಮ, ಸತ್ಯ ತುಂಬಿರಲಿ
**ನಿ-** ನೀತಿ ಮಾತು ಮುತ್ತು, ಮಾನ ಬಂಗಾರ ಇವುಮಾನವನ ಆಭರಣಗಳು
**ಸ-** ಸರ್ವರಿಗೂ ಸಮಬಾಳು, ಸರ್ವರಿಗೂ ಸಮಪಾಲು ದೊರೆಯಲಿ

● ಸಂಗ್ರಹ : **ಕಾಸ್ಪಾಡಿ ದೀಪಾ ಮೊಣ್ಣಪ್ಪ,**
ಬೆಂಗಳೂರು.

## ಹೃದಯ ಚಿಹ್ನೆ

ಹೃದಯ ಚಿಹ್ನೆಯನ್ನು ಪ್ರೇಮದ ಸಂಕೇತವಾಗಿ ಬಳಕೆಗೆ ತಂದವನ ಕಲ್ಪನೆಯು ಅತ್ಯದ್ಭುತವಾದದ್ದು. ಪಾಪ ಇಂದು ಅದು ಹಳಸಲಾಗಿರುವುದಕ್ಕೆ ಅವನೇನು ಮಾಡಿಯಾನು

ಇಂದು ಇದು ಬೀದಿ ಕಾಮಣ್ಣರ ಸಂಕೇತ ಆಗಿರುವುದರಿಂದ ಸಭ್ಯರೆನಿಸಿದವರು ಇವನ್ನು ಬಳಸುವುದು ಕೀಳು ಅಭಿರುಚಿ ಎನಿಸಿಕೊಳ್ಳುತ್ತದೆ.

ನನ್ನ ಈ ಮೇಲಿನ ಅಭಿಪ್ರಾಯಕ್ಕೆ ನಿದರ್ಶನ ಬೇಕಲ್ಲವೇ ನೋಡಿ ಇಂದು ಈ ಚಿಹ್ನೆ ರಸ್ತೆಬದಿಯ ಕಾಂಪೌಂಡ್ ಮೇಲೆ, ರಸ್ತೆಯ ಮೇಲೆ, ಮೈಲಿಕಲ್ಲಿನ ಮೇಲೆ, ಬಸ್‌ಸ್ಟಾಪ್‌ಗಳಲ್ಲಿ ಇನ್ನೂ ಸಾರ್ವಜನಿಕ ಮೂತ್ರಾಲಯಗಳಲ್ಲಿ, ಮಸಿಯಿಂದ (ಇದ್ದಿಲು) ಬರೆದ ಚಿತ್ರಗಳನ್ನು ಕಾಣಬಹುದು. ಜೊತೆಗೆ ಒಂದಷ್ಟು ಅಶ್ಲೀಲ ಪದಗಳು.

ಇತ್ತೀಚೆಗೆ ನನಗೆ ಶಿಕ್ಷಕಿಯೊಬ್ಬರ ಮದುವೆಯ ಆಮಂತ್ರಣ ಪತ್ರ ಬಂದಿತ್ತು. ಆಮಂತ್ರಣ ಪತ್ರದಲ್ಲಿ ಜೋಡಿ ಹೃದಯಗಳ ಚಿತ್ರ ಇತ್ತು. ಶಿಕ್ಷಕ ವೃತ್ತಿಯಲ್ಲಿರುವವರಿಗೆ, ಯಾವುದು ಹಳಸಲು ಯಾವುದು ಆರೋಗ್ಯಕರ ಅಭಿರುಚಿ ಎನ್ನುವ ಪರಿಜ್ಞಾನ ಇರಬೇಡವೆ? ಇಂಥಹ ಶಿಕ್ಷಕ/ಕಿಯರನ್ನು ಹೊಂದಿರುವ ವಿದ್ಯಾಲಯ ವಿದ್ಯಾಲಾಯ (ಕುದುರೆ ಲಾಯದಂತೆ) ಆಗದಿರಲಿ ಎನ್ನುವುದೇ ನನ್ನ ಕಳಕಳಿ.

● **ಕುಂಬುಗೌಡನ ಯು. ರಂಜಿತ್, ಬಿ.ಎಸ್ಸಿ.**
ಮುಕ್ಕಂದೂರು, ಮಡಿಕೇರಿ.

## ಸುಖದಿಂದ ಬಾಳುವಿರಾ ?

| | | |
|---|---|---|
| ಪ್ರೀತಿ ತೋರಿಸಿ | ... | ಗುಲಾಮರಾಗಬೇಡಿ |
| ಕನಿಕರ ತೋರಿಸಿ | ... | ಮೋಸ ಹೋಗದಿರಿ |
| ತಾಳ್ಮೆಯಿಂದ ಇರಿ | ... | ಹೇಡಿಗಳಾಗಬೇಡಿ |
| ಹಿಡಿತದಿಂದ ಇರಿ | ... | ಜಿಪುಣರಾಗಬೇಡಿ |
| ಗಟ್ಟಿಮುಟ್ಟಾಗಿರಿ | ... | ಕೋಪಪಡಬೇಡಿ |
| ಧರ್ಮ ಮಾಡಿ | ... | ದಿವಾಳಿಯಾಗಬೇಡಿ |
| ಆಸೆಪಡಿ | ... | ದುರಾಸೆಪಡಬೇಡಿ |

● **ಬಿದ್ರುಪಣೆ ವೈ. ಜನಾರ್ಧನ**
ಮೈಸೂರು.

## ಕಡಲ ಒಡಲಲ್ಲಿ

ನೀಲಿ ಕಡಲಿನ ಒಡಲನ್ನ
ನೀ ಉಟ್ಟ ಸೀರೆಯ ಉದ್ದಕ್ಕೂ
ಇರುವ ಕಲಾಪತ್ತಿನ ಬೆಳ್ಳಿ ಅಂಚು
ಈ ಕಡಲ ತೀರ (ಬೀಚು)
ನಿನ್ನ ಉಪ್ಪೆನ್ನುವ ಚಿಪ್ಪುಗಳು
ಬಗೆದು ನೋಡಲಿ ದಡವ
ಒಡಲ ಕಡೆದಾಗ ಅಮೃತ
ಅಂದಿನ ಪೌರಾಣಿಕವಲ್ಲ
ಇಂದಿಗೂ ಸಾಮಾಜಿಕ ಸತ್ಯ ತಿಳಿದೀತು
ಈ ಅಗಾಧ ಅನಂತ ಅಪರಾಪರ
ಜಲರಾಶಿಯ ಹುಟ್ಟು
ಇಂದಿಗೂ ಬಿಡಿಸಲಾಗದ ಒಗಟು
ಇತ್ತ ಮುಂಬಾಗಿಲಲ್ಲಿ ಸೂರ್ಯ
ಅತ್ತ ಹಿಂಬಾಗಿಲಲ್ಲಿ ಚಂದ್ರ
ಬಂದು ನಿನ್ನ ಮನೆಯ ಕದವ ತಟ್ಟಿದಾಗ ನೀನು ಕಕ್ಕಾಬಿಕ್ಕಿ
ನೀನು ಆಳವಾದಷ್ಟು ಕರಾಳ
ಭಾರವಾದಷ್ಟು ಶೀತಾಳ
ನೀನು ಮರೆಯಾದರೆ
ಬೆಳಕು ಅರಿಯದ ಭಾಷ ॥ ನೀ ॥
ಮೋಡಗಳಲ್ಲ ಅವು
ಕಡಲಕಾಳಿಯ ಮುಗಿಲ ಮುಂಡೆ
ಅಬ್ಬಬ್ಬಾ ಅದೆಷ್ಟೋ ನಿನ್ನ
ಹೊಟ್ಟೆ ಉರಿ ಜ್ವಾಲೆ !
ಯಾರ ಮೇಲೆ ಕಾಂಕಾರಿ
ಆಯ್ತು ಈ ಮಾರಿರೂಪದ ಗಿರಿಕನ್ಯೆ !
ಬೆದೆ ಬಂದು ಮುಲುಕುತ್ತಿರುವ
ಕಡಲ ಹುಡುಗಿಯ
ಉಬ್ಬು ತಗ್ಗುಗಳನ್ನೆಲ್ಲ ತಬ್ಬಿ
ಮುದ್ದಾಡುತ್ತಿದ್ದಾನೆ ಆ ಸೂರ್ಯ ಗೆಣೆಕಾರ
ಕಡಲ ತರುಣಿಗೆ ತರುಣ ಹುಡುಗ
ನಿತ್ಯ ಮುತ್ತಿಡುವಾಗ ಅವಳ
ಎಡಗೆನ್ನೆಯಲ್ಲಿ ಉದಯರಾಗ
ಬಲಗೆನ್ನೆಯಲ್ಲಿ ಸಂಧ್ಯಾರಾಗ
ಅದು ಬರಿ ಸುಳ್ಳು, ಅದು ಬರಿ ಭ್ರಮೆ
ಯೋಚನೆಯಲ್ಲಿ ಸೂರ್ಯ
ಅದು ಕಡಲಿಗೇಕೆ, ಅರಿಯದೆ ಕಡಲು
ಬಂದು ದಡವ ಸೇರಿಸಲು....॥ನೀ॥

● ರಮೇಶ್ ಹೆಚ್.ಡಿ.
ಹಿನಕಲ್-17

---

(4ನೇ ಪುಟದಿಂದ)

## ಬೈತಡ್ಕ ಜೋಯಪ್ಪ

ಸಂಗಾತಿ : ನಮ್ಮ ಜನಾಂಗದ ಸಮಾಜಗಳು ಅಂದರೆ, ಬೆಂಗಳೂರು, ಮೈಸೂರು, ಕೊಡಗು ಹೀಗೆ ಹಲವುಕಡೆ ಆಯಾಯಾ ಪ್ರದೇಶಗಳಲ್ಲಿ 2-3 ಸಂಘಗಳನ್ನು ಕಾಣಬಹುದು, ಇವುಗಳನ್ನು ಒಟ್ಟಿಗೆ ಸಂಘಟಿಸಲು ಸಾಧ್ಯವಿಲ್ಲವೇ ?

ಉ : ಸಾಧ್ಯ ಇದೆ. ಇದರಿಂದ ಒಂದು ಜನಾಂಗ ಬಲಗೊಳ್ಳುವುದರಲ್ಲಿ ಸಂಶಯವೇ ಇಲ್ಲ. (ದುಡಿಯುವ ಉದ್ಯೋಗಸ್ಥರು ಒಂದು ತಿಂಗಳ ಸಂಬಳ ಕೊಟ್ಟು ಸಹಕರಿಸಿದಾಗ ಅದು ಪ್ರಗತಿಯನ್ನು ಹೊಂದಬಹುದು ಎಂಬ ನಿಲುವನ್ನು ತಳೆದರು)

'ಸಂಗಾತಿ' ಇವರನ್ನು ಮಾತನಾಡಿಸಿ ಹೊರ ಬಂದಾಗ ಇವರ ಸೌಮ್ಯತೆ, ಸೌಜನ್ಯತೆಯ ಸ್ಪಷ್ಟ ಉತ್ತರಗಳು ನಮಗೆ ಸಹಕರಿಸಿದವು. ಕೆಲಸ ಕಾರ್ಯಗಳ ಒತ್ತಡದಲ್ಲೂ ಸ್ವಲ್ಪ ಭಾಗವನ್ನು ಸಮಾಜ ಸೇವೆಗೆ ಮೀಸಲಿಡುವ ಹಂಬಲವನ್ನು ಕಂಡೆವು. ಇವರಿಗೆ ಇನ್ನೂ ಉತ್ತಮ ಪ್ರಶಸ್ತಿ ಬರಲಿ ಎಂದು ನಮ್ಮ ಜನಾಂಗದ ಪರವಾಗಿ ಹಾರೈಸುತ್ತೇವೆ.

---

ಸೂಕ್ತಿ :-

ನಮ್ಮನ್ನು ಹೊಗಳುವವರಿಗಿಂತಲೂ ನಮ್ಮ ತಪ್ಪುಗಳನ್ನು ಎತ್ತಿ ತೋರಿಸುವವರನ್ನು ಗೌರವಿಸುವುದು ಶ್ರೇಷ್ಠ ಗುಣ.

– ಮಹಾತ್ಮ ಗಾಂಧಿ

# ನಿಮ್ಮ ಪತ್ರಗಳು

### ಚೆನ್ನಾಗಿ ಮುಂದುವರಿಯಲಿ

ಮಾನ್ಯರೆ,

'ಕೊಡಗು ಸಂಗಾತಿ' ಹೊಸ ಪತ್ರಿಕೆ ಆದುದರಿಂದ ಇದರ ಬಗ್ಗೆ ಏನೂ ಹೇಳುವುದಿಲ್ಲ. ಪತ್ರಿಕೆಯ ಗುಣಮಟ್ಟ, ಓದುವ ಸಿರಿವಂತಿಕೆಗೆ ಹೆಚ್ಚಿನ ಗಮನ ಕೊಟ್ಟು ಚೆನ್ನಾಗಿ ಮುಂದುವರಿಯಲಿ ಎಂದು ಹಾರೈಸುವೆ.

**ಕುದುಕುಳಿ ರಾಮಪ್ಪ,**
ಉದಯ ಪ್ರೆಸ್, ಸೋಮವಾರಪೇಟೆ

### ನಮ್ಮ ಪ್ರಯತ್ನ ಇದೆ

ಮಾನ್ಯರೆ,

'ಕೊಡಗು ಸಂಗಾತಿ' ಹೆಜ್ಜೆ ಹೆಜ್ಜೆಗೂ ಮುಂದುವರಿಯಲಿ. ಅದಕ್ಕಾಗಿ ನಮ್ಮೆಲ್ಲರ ಪ್ರಯತ್ನ ಮತ್ತು ದೇವರ ಆಶೀರ್ವಾದ ಇದ್ದೇ ಇದೆ.

**ಪಿ.ಕೆ. ಪೂವಯ್ಯ,** ಖಜಾಂಚಿ,
ಕೊಡಗು ಮತ್ತು ದ. ಕನ್ನಡ ಗೌಡ ಸಮಾಜ,
ಬೆಂಗಳೂರು.

### ಕ್ರಾಂತಿಯ ಮೂಲಕ ಹೊಸ ಯುಗಕ್ಕೆ ನಾಂದಿ

ಮಾನ್ಯರೆ,

'ಕೊಡಗು ಸಂಗಾತಿ' ಪ್ರಕಟವಾದ ಅತ್ಯಲ್ಪ ಅವಧಿಯಲ್ಲಿ ಎಲ್ಲರ ಹೃದಯವನ್ನು ಸ್ಪರ್ಶಿಸಿ ತನ್ನತ್ತ ಸೆಳೆಯುತ್ತಿರುವುದನ್ನು ನೋಡಿದರೆ ಖಂಡಿತ ಗೌಡ ಜನಾಂಗ ಹಾಗೂ ಸಂಸ್ಕೃತಿಯಲ್ಲಿ ಒಂದು ಕ್ರಾಂತಿಯನ್ನೇ ಉಂಟುಮಾಡಿ ಹೊಸಯುಗ ಸೃಷ್ಟಿಸುವಲ್ಲಿ ಯಶಸ್ಸು ಪಡೆಯಬಹುದು. ಇದು ಇಡೀ ಗೌಡ ಜನಾಂಗದ ಜನುಮ ಜನುಮದ ಸಂಗಾತಿಯಾಗಿ ಮೂಡಿಬರಲಿ ಎಂದು ಆಶಿಸುತ್ತೇನೆ.

ನಿಮ್ಮ ಸಂಚಿಕೆಗಳನ್ನು ಓದಿದ ಬಳಿಕ ಗೌಡ ಮೂಲತಃ ವ್ಯವಸಾಯಗಾರನೆಂದು ತಿಳಿಯಿತು. ಆದುದರಿಂದ ನಿಮ್ಮ ಚಿಹ್ನೆಯ ಕೆಳಗೆ ನೇಗಿಲ ಚಿಹ್ನೆಯು ನಮ್ಮ ಪಿತ್ರಾರ್ಜಿತ ಉದ್ಯೋಗದ ಕುರುಹು ಆಗಿದ್ದಿದ್ದರೆ ಚೆನ್ನಾಗಿತ್ತು.

**ಹುಲಿಮನೆ ದೇವಯ್ಯ ಹರೀಶ್**
C/o 56 A.P.O.

### ಯಶಸ್ವಿಯಾಗುತ್ತಿದೆ

ಮಾನ್ಯರೆ,

'ಕೊಡಗು ಸಂಗಾತಿ' ಪಾಕ್ಷಿಕ ಪತ್ರಿಕೆ ಇದೀಗ ಎಲ್ಲಾ ಪತ್ರಿಕೆಗಳ ಜೊತೆ ಯಶಸ್ವಿಯಾಗುತ್ತಾ ಮುಂದುವರಿಯುತ್ತಿದೆ. ನಾನು ಹಾಗೂ ನನ್ನ ಸ್ನೇಹಿತರು ಪತ್ರಿಕೆಯನ್ನು ನಮ್ಮವರ ಮನೆ ಮುಟ್ಟಿಸುವ ಪ್ರಯತ್ನ ಮಾಡುತ್ತಿರುವೆವು.

**ಕೂಡಕಂಡಿ ಉತ್ತಯ್ಯ ಅಶೋಕ್**
ಬೆಂಗಳೂರು.

### ನಿರಂತರ ಹೊಮ್ಮಿ ಬರಲಿ

ಮಾನ್ಯರೆ,

ನೂತನವಾಗಿ ಪ್ರಾರಂಭವಾಗಿರುವ ಕೊಡಗು ಸಂಗಾತಿ ಪತ್ರಿಕೆ ನಿರಂತರವಾಗಿ ಹೊಮ್ಮಿ ಬರಲಿ ಎಂದು ಶುಭಕೋರುವ,

**ಕುಂಇಳಿಯನ ಬಿ. ತಮ್ಮಯ್ಯ,**
ಕೊಡಗು ಸಂಗಾತಿ ಏಜೆಂಟ್, ಬಿ. ಬಾಡಗ, ಚೇರಂಬಾಣೆ

### ಉತ್ಸಾಹ ಕೆರಳಿಸಿದೆ

ಮಾನ್ಯರೆ,

ನೀವೇ ಹೇಳಿದ್ದೀರಲ್ಲ ಪೆನ್ನು ಹಿಡಿದು ಕೂತರೆ ಏನು ಬರೆಯಬೇಕುಂತ ಗೊತ್ತಾಗುತ್ತೆ ಅಂತ. ಹಾಗೇ ಆಯ್ತು. ನನ್ನ ಅನುಭವ ಬರೆಯುತ್ತಾ ಹೋದರೆ ಸರಿಯಾದ ಪದಗಳೇ ಸಿಕ್ತಾ ಇಲ್ಲ ಮತ್ತು ಮುಗಿವುದೇ ಇಲ್ಲ ಏನ್ಮಾಡಲಿ ? ಕೊಡಗು ಸಂಗಾತಿ ನನ್ನ ಉತ್ಸಾಹ ಕೆರಳಿಸುವಲ್ಲಿ ಯಶಸ್ವಿಯಾಗಿದೆ.

**ಕೋಟೆಮನೆ ಮನೋಹರ ಶಿವಯ್ಯ**
ಮದೆನಾಡು.

### ಸಹಕಾರ ಕೊಟ್ನೆ

ಮಾನ್ಯರೆ,

ನಿವ್ ಕಳ್ಸಿದ ಪತ್ರಿಕೆ ಸಿಕ್ತ್ ಉಟ್ಟ್. ಕೆಲವು ಜನಕ್ಕೆ ಪತ್ರಿಕೆ ವಿಷ್ಯನೇ ಗೊತ್ಲೆ. ಅವುಕೆಲ್ಲಾ ತಿಳ್ಸುವಲ್ಲಿ ನಾನ್ ನನ್ನ ಕೈಲಾದಷ್ಟ್ ಸಹಕಾರ ಕೊಟ್ನೆ. ನೀವು ಆನೆ ಹಿಡಿಯುವಂತಹ ಸಾಹಸಕ್ಕೆ ಕೈ ಹಾಕೊಳರಿ. ಅದ್ ಯಶಸ್ವಿ ಆಕುತ ನಮ್ಮ ಕುಲದೇವ್ರು ವೆಂಕಟರಮಣನಲ್ಲಿ ಬೇಡಿಕಣೆ.

**ಕಡ್ಲೇರ ತಮ್ಮಯ್ಯ,** ಬೆಂಗಳೂರು.

## ಅರೆ ಭಾಷೆರ ವಿಭಾಗ

# ಚಿಣ್ಕ್ ಮಿಣ್ಕ್ ಸೊಸೆಗೆ ದಡ್ಕ್ ಬಡ್ಕ್ ಅತ್ತೆ

ಬಾರಿಯಂಡ ಆರ್. ಜೋಯಪ್ಪನವು 'ಸಂಗಾತಿ' ಯ ಸ್ಥಿರ ಲೇಖಕರಾಗಿಯೊಳೊ ಇವು ಕೊಡಗಿನ ಮದೆನಾಡಿನ 'ಮದೆ ಮಹೇಶ್ವರ್ ಜೂನಿಯರ್ ಕಾಲೇಜ್' ಲಿ ಉಪನ್ಯಾಸಕರಾಗಿ ಕಾರ್ಯನಿರ್ವಹಿಸ್ತೊಳೊ. ಇದ್ ಅವರ ಒಂದ್ ಲೇಖನ. —ಸಂ.

ಕಾನ್ವೆಂಟ್‌ಲಿ ಓದಿದ ಇಂಗ್ಲೀಷ್‌ಗಾರ್ತಿ ರೊಸೆಯಾಗಿ ಮನೆಗೆ ಬಂದದೇಂತ ಕೇಳ್ದ ಅತ್ತೆಗೆ ಖುಷಿಯೋ ಖುಷಿ. "ನನ್ನ ಸೊಸೆ ಪ್ರೊಲರ್ಗಾರ್ತಿ. 'ಕಾವೆರ್ಂಟ್' ಲಿ ಅವ್ವಳು ಓದಿದ್‌ಗಡ. ಮಾತಾಡ್ದ್ಲೆಲ್ಲಾ ಇಂಗ್ಲೀಷ್‌ಲೇ ಗಡ. ಪುಸ್ತಕ ನೋಡಿ ಕಂಡ್ ಅಡಿಗೆ ಬಾಳಲಾಯ್ಕ್ ಮಾಡ್ತೆ ಗಡಾ ! ಬಿಸಲ್‌ಗೆ ಬಿಸ್‌ಲ್‌ಕೊಡೆ, ಮಳೆಗೆ ಮಳೆಕೊಡೆ ಹಿಡ್ಪ ಓಡಾಡ್ತೆ ಗಡ...." ಹಿಂಗೆ ಸೊಸೆ ಬಗ್ಗೆ ಅತ್ತೆ ಗುಣ ಗಾನ ಮಾಡ್ತಾ ಇತ್.

ಚಿಣ್ಕ್ ಮಿಣ್ಕ್, ಚಿಣ್ಕ್ ಮಿಣ್ಕ್‌ಂತ ಸದ್ ಮಾಡಿಕಂಡ್ ಸೊಸೆ ಮನೆ ತುಂಬಾ ಓಡಾಡಕನ ಅತ್ತೆ ಹಿಗ್ಗಿ ಹೀರೆಕಾಯಿ, ಸೊಕ್ಕಿ ಸೋರೆಕಾಯಿ ಆದಂಗೆ ಆತ್. ಸೊಸೆ ಕಾಲಿಗೆ ಬೆಳ್ಳಿ ಕಾಲುಂಗುರ, ಆ ಕಾಲುಂಗುರಕ್ಕೆ ಗೆಜ್ಜೆ. ಕಾಲ್ ಚೈನಿಗೂ ಗೆಜ್ಜೆ. ಆ ಗೆಜ್ಜೆ ಸದ್ ಕೇಳದೇ ಇದ್ದ ಮನೆಯವ್ರುಕೆಲ್ಲಾ ಒಂದ್‌ಥರಾ ಆತ್. ಸೊಸೆ ಆಡಿಗೆ ಮನೆಗೆ ನುಗ್ಗಿದೇ ತಡ. ಈ ಚಿಣ್ಕ್ ಮಿಣ್ಕ್‌ಸದ್ ಕೇಳ್ದ ಕೊತ್ತಿ ಹೆದ್ರಿ ಏಣಿ ಹತ್ತಿ ಅಟ್ಟಕ್ಕೆ ಓಡಿಹೋತು. ನಾಯಿಗಳೋ ಇದ್ ಯಂತದೋ 'ದೆಯ್ಯಂತ' ಹೆದ್ರಿ ಹೆದ್ರಿ ಬೊಗ್‌ಳಿಕೆ ಶುರ್ ಮಾಡಿಕಂಡೊ. ಕೊಟ್ಟೆಗೆ ಕಡೆ ಸೊಸೆ ಹೋತು. ಕೇಳದೇ ಇದ್ದ ಸದ್ ಕೇಳಿ ಕರಿಯಣ ಎತ್ ಹಗ್ಗ ತುಂಡ್ ಮಾಡ್ಕಂಡ್ ಓಡಿಹೋತು. ಉಳ್‌ದ ದನಗ ಮಲಗಿದ್ದವು ಎದ್ ನಿತ್‌ಕಂಡೊ. ಹೊಸ ಸೊಸೆ ಮನೆಗೆ ಬಂದರ್‌ಂದ ಮನೆ ಮೂಲೆ ಮುಡುಕೆಲ್ಲಾ ಬೆಳಕ್ ಕಂಡಂಗಾತ್. ಹಂಗೂ ಹಿಂಗೂ ಸೊಸೆ ಬಂದ್ ಒಂದ್ ತಿಂಗಾತ್.

ದಿನಕಳ್ದಂಗೆಲ್ಲಾ ಅತ್ತೆದ್ ಮೊಕ ಬೆಳಗಾಕೇಲೆ. ಮೊಕ ಕೆಂಬಡೆ ಕಾಯಿ ಆತ್. ಅತ್ತೆ ಆಡುವ ಮಾತೆಲ್ಲಾ ದದ್ ಮಡಿಕೆಗೆ ಒಡ್ದಂಗಾತ್ ! ಒಂದಿನ ಬೆಳಿಗ್ಗೆ ಅತ್ತೆದ್ 'ಉದಯರಾಗ' ಶುರಾತ್. "ಏನ್‌ನೇ ಒನಕೆಲಿ ಗುದ್ದಿದಂಗೆ ದಡ್ಕ ಬಡ್ಕ್ ಹೆಜ್ಜೆ ಹಾಕಿಯಾ. ಹೆಣ್ ಆದೋಳು ಸೊಲ್ಪ ಮೆಲ್ಲ ನಡಿಯೋಕು. ಗಾಳಿ ಬೀಸಿದಂಗೆ ಓಡಾಡಿರೆ ನಿನ್ನ ಸೆರ್‌ಗ್‌ನ ಗಾಳಿಗೆ ದೀಪ ಕೆಟ್‌ಹೋದೆ" ಅತ್ತೆ ಈ ರೀತಿ ಬುದ್ಧಿ ಹೇಳಿಕೆ ಶುರು ಮಾಡ್ತ್. "ನಿಂಗೆ ಬುದ್ಧಿ ಕಲ್ಸದೆ ಬುಡಿಕಿಲೆಂತ" ಸೊಸೆ ಲೆಕ್ಕ ಹಾಕಂಡತ್.

ಇನ್ನೊಂದಿನ ಅತ್ತೆ ಸಿಡ್ಕ್ ಮಿಡ್ಕ್ ಶುರ್ ಮಾಡೇಬುಡ್ತ್. ಪಾತ್ರ ತೊಳೆಕನ ಸೊಲ್ಪ ಸದ್ದಾಗಿ ಹೋತು. "ಯಂಥನೇ ಆದ್. ಮಡಿಕೆನ ಒಡ್ದ್ ನಿನ್ನ ಎದೆ ಮೇಲೆ ಹಾಕಂಡ. ಹಟ್ಟಿ ಬಾಚಿಕೆ ಹೋಕನೂ ಚಪ್ಪಲ್ ಬೇಕಾ ? 'ನೀರ್ ಮುಟ್ಟಕೆ ಹೋಕನೂ' ಚಪ್ಪಲ್. ಅದೇ ಚಪ್ಪಲ್‌ನ ಆಡಿಗೆ ಮನೆಗೂ ಹಾಕಿಯ. ತವರ್ ಮನೇಲಿ ಎದೆ ಮುರ್ದಿದ್ದರೆ ಆಗಿತ್ ಇಲ್ಲಿ ನೀ ರಾಣಿಯಂಗೆ ಮೆರಿಯಕೆ ಬಂದೊಳ. ಕುದ್ದರೆ ಒಳ್ಳೆ ಬಾಣಂತಿ ಕುದ್ದಂಗೆ ಕಾಲ್‌ನೀಂಡಿ ಕುದ್‌ಕಂಡಿಯ. ಮೊನ್ನೆ ಗಂಡನೊಟ್ಟಿಗೆ ಪಿಸಿ ಪಿಸಿ ಹೇಳ್ ಇದ್ದ. ಯಾವ ಮಾಡಿ ಮನೆ ಕಟ್ಟಿಕೋ ? ಆಂವನೋ ಎಲ್ಲಕ್ಕೂ ಬಸವನಂಗೆ ತಲೆ ಆಡ್ಸಿದೆ. ನಂಗೆ ಕೊಸ್ಲಕ್ಕಿ ಗಂಜಿ ಇಕ್ಕಿಯಲ್ಲ. ನೀ ಬೇಕಾದರೆ ಅದ್ನ ಮುಕ್ಕು. ನಂಗೆ ಬಿಸಿ ಬಿಸಿ ಎರಡ್ ರೊಟ್ಟಿಕೊಡು". ಈ ಉದಯರಾಗ ಕೇಳ್ದ ಸೊಸೆಗೆ ದುಃಖ ಹೇಳಿಕೆ ಬೊತ್.

ಅತ್ತೆ ಈ ರೀತಿ ಹೀನಾ ಮಾನ ಬೊಯ್ಯೊದು ಕೇಳ್ದ ಮಾಂವ "ಯಂಥನೇ ನಿಂದ್ ಬೆಳಿಗ್ಗೆ ಪಿರಿ ಪಿರಿ ? ಇಂದೋ ನಾಳೆಯೋ ಸರಿ ಮಾಡಿಕಂಡದೆ, ಸೊಲ್ಪ ಯತ್ಯಾಸ ಆದೆ. ಅದನ್ನೆಲ್ಲಾ ದೊಡ್ಡದ್ ಮಾಡಿ ಕಾಗದ್. ಈ ರೀತಿ ನೀ ದಡ್ಕ ಬಡ್ಕಂತ ಆಡಬ್ಯಾಡತ್ರ" ಹೇಳಕನ "ಓಹೋ ಸೊಸೆನ ಕಂಡ್ರೆ ನೀವ್‌ಗೆ ಖುಷೀ.... ನೀವ್ರು...ಂತ್ರ" ಇನ್ನೇನೋ ಹೇಳಿಕೆ ಬಾಯಿ ತೆರ್ದ ಹೆಣ್‌ನ ಬಾಯಿ ಮುಚ್ಚಿಕೆ ಹೇಳ್ದ ಮಾಂವ ಹೇಳ್ತ್. "ಹಿಂದೆ ನೀನೂ ಈ ಮನೆಗೆ ಸೊಸೆಯಾಗಿ ಬಂದವ್ರಳೆ. ನೀ ಬಂದ ಒಂದೇ ವಾರಲಿ ಈ ಮನೆ ಹೆಂಗಾತ್ ನಿನ್ನ ಅತ್ತೆನ ಜುಟ್ ಹಿಡ್ದ ಎಳ್ದಾಡಿ ಬಾಡೆಂದ ಕೈಯಾಲೆಗೆ ಎಳ್ದ ಹಾಕಿದ. ಅದೂ ಸಾಲದೆ ಕೈಯಾಲೆಂದ ಅಂಗಳಕೆ ನೂಕಿದಲ್ಲಾ, ಅದೆಲ್ಲಾ ಮತ್ರ್ಗಳ. ನಾ ಮರೆಕಿಲೆ. ನೀನೂ ಒಂದ್ ಹೆಣ್. ಈ ಸೊಸೆನೂ ಒಂದ್ ಹೆಣ್. ಈ ರೀತಿ ಹೆಣ್‌ಗಳೇ ಹೆಣ್‌ಗಳ್ನ ದೂಷಣೆ ಮಾಡ್ದು ತಪ್ಪು". ಇಷ್ಟ್ ಹೇಳಿ ಮಾಂವ ಕನ್ನಡ್ಕ ಸರಿಮಾಡಿಕಂಡ್ ದೊಣ್ಣೆ ಕಟ್ಟಿಕಂಡ್ ಹೊರಗೆ ಹೋತು.

ಅತ್ತೆ ದಡ್ಡೆ ಹಂದಿಯಂಗೆ ಗುರ್‌ಗುಟ್ಟಿಕಂಡೇ ಇತ್. ಸೊಸೆ ಕಣ್ಣೀರ್ ಹಾಕಂಡ್ ದಿನ ನೂಕುತ್ತಾ ಇತ್. ಗಂಡ ಅಪ್ಪನೂ ಸಮಾಧಾನ ಮಾಡಿಕಂಡ್ ಹೆಣ್‌ನೂ ಸಮಾಧಾನ ಮಾಡಿಕಂಡ್ ಪೇಚಾಡಿಕಂಡ್ ದಿನಕಳಿತಾ ಇತ್.

ಅತ್ತೆಗೊಂದು ಕಾಲ !
ಸೊಸೆಗೊಂದು ಕಾಲ !!

## ಮನೆ ಮದ್ದ್ 'ತೊಂಡೆ ಬಳ್ಳಿ'

"ಹಿತ್ತಲ ಗಿಡ ಮದ್ದಲ್ಲ" ತೇಳುವ ಹಂಗೆ, ನಮ್ಮ ಮನೆ ಪಕ್ಕದಲ್ಲೇ ತೊಂಡೆ ಬಳ್ಳಿ ಇದ್ದರು ಸಹ ನಮಗೆ ಅದರ ಮೇಲೆ ಗಮನನೇ ಇರ್ಬುಲೆ.

ಮೂರರಿಂದ ನಾಲ್ಕು ಗಿಣ್ಣು ಇರ್ವ, ಒಳ್ಳೆ ಬೆಳ್ದ ಬಳ್ಳಿಯ ತುಂಡುಗಳ್ನ ತಕಂಡ್, ಹಟ್ಟಿಗೊಬ್ಬರ ಮತ್ತೆ ಮಣ್ಣಿನ ಮಿಶ್ರಣ ತುಂಬಿದ ಹೊಂಡಗಳ್ಲಿ, ಎರಡ್ ಗಿಣ್ಣುಗಳ್ನ ಮಣ್ಣ್‌ಲಿ ಸೇರ್ಸಿ, ಉಳ್ದ್ ಗಿಣ್ಣುಗಳ್ನ ಮಣ್ಣ್‌ನ ಮೇಲಿರುವಂಗೆ ನೆಡಕು.

ಇದಕ್ಕೆ ಚಪ್ಪರದ ಬದಲ್, ತಂತಿದ್ ಜಾಲರಿ ಹಾಕುದಂರ್‍ದ ನಾಲ್ಕು ವರ್ಷದವರೆಗೆ ಸಹ ಒಳ್ಳೆ ಫಸಲ್ ತೆಗಿಯಕ್ಕ್. ವರ್ಷ ವರ್ಷ ಮಾತ್ರ ಫಸಲ್ ಕಮ್ಮಿ ಇರ್ವ ಸಮಯಲಿ ಬಳ್ಳಿ ಕಟ್ಟ್ ಮಾಡಿ, ಬುಡದ ಮಣ್ಣ್‌ನ ಸಡ್ಲ ಮಾಡಿ, ಹಟ್ಟಿಗೊಬ್ಬರ ಕೊಟ್ರೆ ಸಾಕ್.

ತೊಂಡೆ ಚಪ್ಪರನ ನಮ್ಮ ಸ್ನಾನದ ರೂಮುನ ಪಕ್ಕಲೇ ಮಾಡುದಂರ್‍ದ, ಸ್ನಾನ ಮಾಡಿ ಹಾಳಾಗಿ ಹೋಗುವ ನೀರ್‍ಗೆ ಕಣಿಕೊಟ್ಟ್, ತೊಂಡೆ ಗುಂಡಿಗೆ ಬುಟ್ರೆ, ನೀರು ಹೊಯ್ಯುವ ಕೆಟ್ಸನೂ ಇಲ್ಲೆ, ಪುಕ್ಸಟೆ ಫಸಲ್ ಸಿಕ್ಕಿದೆ.

ತೊಂಡೆ ತುಂಡುಗಳನ್ನ ನೆಟ್ಟ್ ಐದಾರ್ ತಿಂಗಳ್ಲಿ ಫಸಲ್ ಬಾಕೆ ಶುರು ಆದೆ. ಇದರ ದೊಡ್ಡ ಪ್ರಮಾಣಲಿ ಬೆಳ್ಸರೆ, ಒಳ್ಳೆ ದುಡ್ಡು ತರ್ವ ಬೆಳೆನೂ ಹೌದು.

ಮಾತ್ರ ಅಲ್ಲ ತೊಂಡೆ ಬಳ್ಳಿ "ಮನೆ ವೈದ್ಯ" ತೇಳ್ರೂ ತಪ್ಪಾಕಿಲೆ.

ಕೈಕಾಲ್ ಊದಿದ್ದರೆ : ಕೈಕಾಲ್ ಊದ್ರಿಕಂಡ್ರೆ ತೊಂಡೆ ಬಳ್ಳಿದ್ ರಸನ ಊತವಿರ್ವ ಭಾಗದ ಮೇಲೆ ಲೇಪಿಸಿಕಂಡ್ ಬಂದ್ರೆ ಊತ ಕಮ್ಮಿ ಆದೆ.

ಕಿಬ್ಬೊಟ್ಟೆ ಬೇನೆ : ಮಲ ವಿಸರ್ಜನೆ ಸಮಯಲಿ ಕಿಬ್ಬೊಟ್ಟೆಲಿ ನೋವು ಕಾಣ್ಸಿಕೊಂಡರೆ ಹಾಗೂ ಮಲದಲ್ಲಿ ರಕ್ತ ಮಿಶ್ರಿತವಿದ್ದರೆ, ಇದರ್‍ನ ದಿನಕ್ಕೆ ಮೂರು ಸಲದಂಗೆ ಕೊಡ್ತಾ ಬಂದರೆ ಗುಣ ಸಿಕ್ಕಿದೆ.

ಮುಟ್ಟಿನ ಸಮಯದಲ್ಲಿ ಹೊಟ್ಟೆ ಶೂಲೆಗೆ : ಹೊಟ್ಟೆ ನೋವು ಇರ್ಕನ ಅರ್ಧ ಔನ್ಸ್ ಪ್ರಮಾಣದ್ದ್ ಹಸಿ ತೊಂಡೆಕಾಯಿ ರಸಕ್ಕೆ 1 ಚಮ್ಚ ಜೇನ್ ತುಪ್ಪ ಸೇರ್ಸಿ ದಿನಕ್ಕೆ ಒಂದರಿಂದ ಎರಡ್ ಹೊತ್ತು ಸೇವಿಸಿಕ್ಕೆ ಕೊಡುದಂರ್‍ದ ನೋವು ಉಪಶಮನ ಆದೆ.

ಸಂಗ್ರಹ : ಕೋಟಿಮನೆ ಮನೋಹರ ಶಿವಯ್ಯ,
ಮದೆನಾಡು.

---

## ಇಳ್ದ್ ಬಾ

ಓ ಮಳೆರಾಯ ಒಮ್ಮೆ ನೀ ಇಳ್ದ್ ಬಾ
ಕನ್ನಡ ನಾಡ್‌ಲಿ ಕುಣ್ದ್ ಬಾ
ಹಸಿರ್ ಬೆಳೆ ಸೀರೆನಾ ಉಡ್ಸಿ ಬಾ
ಬರಗಾಲ ಕೂಗನ್ನ ತೊಳ್ದ್ ಬಾ
ಸುಭಿಕ್ಷೆ ಹೊಳೆನ ಹರ್ಸಿ ಬಾ

ಕೊಳವೆ ಬಾವಿ ನೀರ್ ಆರಿ ಹೋಗ್‌ತಾ ಬಾತ್
ಹಳ್ಳ ಕೆರೆಗೂ ನಿನ್ನ ಗ್ಯಾನ ಮಾಡಿಕಂಡೇ ಮಳೊ
ಜೀವ ರಾಶಿಗ ಎಲ್ಲಾ ನಿನ್ನ ಕಾದ್‌ಕಂಡೇ ಮಳೊ
ಬಾವಿ ನೀರ್‌ನ ಕುಡ್ದ್ ಉಸ್ರು ಎಳೆವಾ ನಾವು
ಎಷ್ಟ್ ಕಾಯಕೂ ನಿನ್ನ ಅವತಾರಕ್ಕೆಂತಾ

● ಪರ್‍ಲಕೋಟಿ ಗೋಪಾಲ ರಾಧಕೃಷ್ಣ
ಬಿಳಿಗೇರಿ ಗ್ರಾಮ, ಮಡಿಕೇರಿ ತಾ||

---

## ಮುತ್ತಿನಂತ ಮಾತ್

ನಾವ್ ಎಂಥಾದರ್ ಮಾಡೋಕುತಾದರೆ
ದೀರ್ಘ ಕಾಲ ಅದ್‌ಕೆ ಅಂಟಿಕೊಂಡಿರಕು,
ಆಗ ಯಶಸ್ಸಿ ಸಿಕ್ಕುದರ್‌ಲಿ ಸೊಂಶಯನೇ ಇಲ್ಲೆ.

ನಡತೆ ಒಂದ್ ಮರ ಇದ್ದಂಗೆ,
ಹೆಸರ್‌ವಾಸಿ ಅದಿಕ್ಕೆ ನೆರಳ್ ಇದ್ದಂಗೆ,
ನಾವ್ ಅಂಟಿಕೊಂಡಿರ್‌ದು ನೆರಳ್,
ನಿಜವಾಗಿ ಇರ್ದ್ ಮರ.

● ಹೊಸೊಕ್ಲು ಹರಿಣಿ ಬೆಳ್ಯಪ್ಪ.

## ದಿವ್ಯ ಜ್ಯೋತಿಯಾಗಲಿ....

ಬೆಳಗಲೀ ಬೆಳಗಲೀ ಬೆಳಗಲಿ ದಿವ್ಯಜ್ಯೋತಿಯಾಗಿ
ಬೆಳಗಲೀ ನಮ್ಮ್ ಕೊಡಗು ಸಂಗಾತಿ
ಬಿರುಗಾಳಿಯಂಗೆ ಆಗಿ ಬೂದಿಯೊಳಗೆ
ಮುಚ್ಚಿರುವ ಕೆಂಡದಂಗೆ ಇರುವ ಈ
ಗೌಡ ಸಂಸ್ಕೃತಿನ ಉರ್‌ಗಿ ಬೆಳ್ಗಿಸಲಿ ॥ಬೆ॥
ಹೈದ-ಗೂಡೆ, ಯೌವನ-ಮುಪ್ಪು, ದೊಡ್ಡಂವ
ಸಣ್ಣಂವ ತೇಳುವ ಎಲ್ಲರ ಎದೆನ ತಟ್ಟಿ
ಒಂದ್ ಮಾಡಿ ನಾವೆಲ್ಲಾ ಒಂದೇ ತೇಳುವಂಗಾಗಿಸಲಿ ॥ಬೆ॥
ಹಳ್ಳಿ–ಪಟ್ಟಣ, ಕುಂದು-ಮಟ್ಟೆ
ಕಳ್ಳು-ಹೆದರಿಕೆತೇಳುವ ಮತ್ತ್ ಸೀಳಿಸಿ, ಗೌಡ
ಸಂಸ್ಕೃತಿತೇಳುವ ಕರೆಗೆ ಓಂಕಣಿಸುವಂಗಾಗಲಿ ॥ಬೆ॥
ಮುದ್ದಣ್ಣನ ಕಾಲದಲ್ಲಿ ಲಾಯಿಕ್ ಆಗಿ
ಮತ್ತೆ ರೆಕ್ಕೆ ಮುರ್ದ ಅರೆಭಾಷೆಗೆ
ದಾರಿ ಬೆಳ್ಕ್ ಆಗಲಿ ಈ ಸಂಗಾತಿ ॥ಬೆ॥
ವೀರ-ಧೀರರಾಗಿ ಕಾವೇರಿ ಮಾತೆಯ ಹೊಟ್ಟೆಲುಟ್ಟಿ
ಇಗುತಪ್ಪನ ಆರೈಕೆಯಲ್ಲಿರುವ ಗೌಡರಿಗೆ
ಜ್ಞಾನಜ್ಯೋತಿ ಕೊಡುವಂತಾಗಲಿ ॥ಬೆ॥
ನಾವ್ ಯಾರ್ ಏನ್ ಹೆಂಗೆ ಎಂತವ್
ಮುಂದೆ ಏನ್ ಮಾಡಕ್‌ತೇಳಿ ತಿಳ್ಸಿ
ಒಡಿದೆತ್ತರಕ್ಕೇರಿಸಲಿ ಈ ಕೊಡಗು ಸಂಗಾತಿ ॥ಬೆ॥
ಹುಟ್ಟಿಸಿದ ಪ್ರಭುವನ್ನು ಚಿರವಾಗಿಸಿ ಬೆಳೆಸಿದ
ಹಿತೈಷಿಗಳನ್ನು ಉದ್ಧರಿಸಿ ಉಚ್ಛ ಭಾರತದ ಶೃಂಗಕ್ಕೇರಿ
ನಿಲ್ಲ್‌ವ ಧ್ರುವವಾಗಲಿ ಈ ಸಂಗಾತಿ ॥ಬೆ॥
ನಿತ್ಯ ಹಸಿರು ತೊಟ್ಟು, ಕಾಫಿ, ಕಿತ್ತಳೆ, ಯಾಲಕ್ಕಿ
ಒಳ್ಳೆ ಮೆಣ್ಸ್ ಬೆಳೆಯುವ ನಾಡ್‌ಲಿ ಹುಟ್ಟಿದ ಈ ಕೋಮಲ
ಸಂಗಾತಿ ಆಗಲಿ ಕನ್ನಡ ಮಾತೆಯ ಮುದ್ದಿನ ಮಗಳಾಗಿ ॥ಬೆ॥
ಕೈಮುಗ್ದ್ ಕೇಳಿನೆ ಮಾತೆ ಕಾವೇರಿನ,
ಅಪ್ಪಇಗ್ಗುತಪ್ಪನ, ಗುರುತಿಮ್ಮಪ್ಪನ ಗೌಡ ಸಂಸ್ಕೃತಿ
ಬೆಳ್ದ್ ಎತ್ತರಕ್ಕೇರಿ ತನ್ನ ಪರಿಮಳ ಎಂಟ್ ದಿಕ್ಕಿಗೆ
ಹರ್ಡಿ ಒಂದ್ ಮಾಡ್ಲಿ ಗೌಡರ್‍ನ ॥ಬೆ॥
ಎಲ್ಲ ಭಾಷೆಗಳ ಮಧ್ಯೆ ಎದ್ದ್ ನಿತ್ತ್
ಬೆಳಗಲಿ, ಭಾರತ ಮಾತೆಯ ಹದಿನಾರನೇ ಮಗಳಾಗಿ
ಬೆಳಯಲೀ ನಮ್ಮ್ ಅರೆಭಾಷೆ ॥ಬೆ॥

● **ಹುಲಿಮನೆ ಹರೀಶ್ ದೇವಯ್ಯ**
ಮದೆನಾಡು.

## ನ ಗೆ ಹ ನಿ ಗ ಳು

ಇಬ್ಬರ್ ವಿದ್ಯಾರ್ಥಿಗ ಹೊರಗೆ ಮಾತಾಡ್ತಾ ಇದ್ರೊ,

ಒಬ್ಬ : ಏನ್, ಕ್ಲಾಸ್‌ಲಿ ಲೀವ್ ಲೆಟರ್ ಕೊಟ್ಟದಕ್ಕೆ ನಿನ್ನ ಟೀಚರ್ ಹೊರಗೆ ಹಾಕಿ ಬುಟ್ರಾ ?

ಮತ್ತೊಬ್ಬ : ಹೌದ್‌ರಾ, ನಾನ್ ಲೀವ್ ಲೆಟರ್‌ನ ಕವರ್‌ನ ಮೇಲೆ ಮರ್‍ತ್‌ಬುಟ್ಟ್ ಲವ್ ಲೆಟರ್‌ಂತ ಬರ್ದ್ ಬುಟ್ಟಿದ್ದೆ ಅದ್ಕೆ.

❖ ❖ ❖

ಬಸ್‌ಗೆ ಹತ್ತಿ ಕುದ್ದ ಕೂಸಪ್ಪ ಕಂಡಕ್ಟರ್‌ನಕಲೆ ಹೇಳ್ತ್, ಚೆಟ್ಟಿಮಾನಿಗೆ ಎರಡ್ ಟಿಕೇಟ್ ಕೊಡಪ್ಪಾ.

ಕಂಡಕ್ಟರ್ : ಇನ್ನೊಂದ್ ಯಾರಜ್ಜಾ ?

ಕೂಸಪ್ಪಜ್ಜ : ಅದ್ ನನ್ನ್ ಹೆಣ್ಣ್‌ನ ಅಣ್ಣನ ಎರಡ್ನೇ ಮಂಜ.

● **ಎಂ.ಇ. ಮಹಮದ್,** ಮಡಿಕೇರಿ.

ನೆಂಟ : ಎ ಹೈದ ನಿಮ್ಮನೇಲಿ ಎಷ್ಟೊತ್ತಿಗೆ ಊಟ ಮಾಡ್ತು
(ಪಾಪ ಅಂವ ಹಸ್ತುಟು)

ಹೈದ : ನೀವು ಹೋದ ಮೇಲೇತ ಅಮ್ಮ ಹೇಳ್ತ್.

* * *

ಚಾಂಪ, ಚಾಮ್ಯವ್ವಒಮ್ಮೆ ಒಂದು ಹೋಟೆಲ್‌ಗೆ ಹೋದೋ.
ಚಾಂಪ ಒಬ್ಬನೆ ದೋಸೆ ತಿಂಬದು ನೋಡಿ ಸಪ್ಲೆಯರ್‌ಕೇಳ್ತ್, ಯಾಕೆ ಚಾಂಪ ಒಬ್ಬನೇ ತಿಂಬತೊಳ್ದ್, ಚಾಮ್ಯವ್ವ ತಿಂಬಲ್ಯಾ ?
ಚಾಂಪ ಹೇಳ್ತ್, ನಮ್ಹುತ್ರ ಒಂದೇ ಹಲ್ಲ್ ಸೆಟ್ ಇರ್‍ದರ !!

● **ಬೋಳನ ಜಯಪ್ರಸಾದ್,**
ಕುವೆಂಪುನಗರ, ಮೈಸೂರು.

## ಫಿರ್ದೋಷಿ ಅಲ್ಲ ಫಿರ್ದೌಸ್

ಸಂಚಿಕೆ 5ರ 'ಕೊಡಗು ಸಂಗಾತಿ'ಯಲ್ಲಿ ಪ್ರಕಟಗೊಂಡ ನಗೆಹನಿ ಶಿರೋನಾಮೆಯಡಿ "ಫಿರ್ದೋಷಿ ಪತ್ರಿಕೆ" ಎಂದಾಗಿರುವುದನ್ನು ಫಿರ್ದೌಸ್ ಪತ್ರಿಕೆ ಎಂದು ಓದಿಕೊಳ್ಳಲು ಕೋರಿಕೆ.
**–ಸಂ.**

## ಪ್ರಶಸ್ತಿ ಸಿಕ್ಕ್‌ಟು

ವಿಲ್ಲ್ರಿಯ 7ನೇ ಮದ್ರಾಸ್ ರಿಜಮೆಂಟ್‌ಲಿ ಹವಾಲ್ದಾರ್ ಆಗಿ ದುಡಿತ್ತಿರುವ ಶ್ರೀ ಮಂಞವುರ ಮಾದಪ್ಪ ಪಣಪತಿನವುಕೆ 'ಚೀಪ್ ಆಫ್ ದಿ ಆರ್ಮಿ



ಕಮಾಂಡರ್' ಇವರ್‌ಂದ ಉತ್ತಮ ಸೇವಾ ಪ್ರಶಸ್ತಿ ಮತ್ತೆ ಮೆಡ್ಲ್ ಸಿಕ್ಕ್‌ಟು ತೇಳಿ ತಿಳ್ದ್ ಬಂದುಟು. 1995ರ್‌ಲಿ ಹರಿಯಾಣದ ಸಿರ್ಸಲಿ ನೆರೆ ಹಾವಳಿ ಆಕಾಕನ ರಕ್ಷಕನಾಗಿ ಮಾಡ್ದ ಉತ್ತಮ ಕೆಲ್ಸಕೆ ಆಯ್ಕೆ ಮಾಡ್ದ ಹತ್ತ್ ಮಂದಿಲಿ ಇವ್‌ಕೆ ಮಾತ್ರ ಪುರಸ್ಕಾರ ಸಿಕ್ಕಿದ್.

## ಚು ಟು ಕ ಗ ಳು

### ಇದ್ದ ಮಾರ್ಯಾದೆ ಕೆಮ್ಮಿ ಆಕನ

ಗೌಡ ಜನ ದಕ್ಷಿಣಂದ ಕೊಡ್‌ಗಿಗೆ
ಬಂದ್ ಆತ್ ಶತಮಾನ,
ಬಾಕನ ಆತ್ ಅವರ್ಲ್ಲಿ
ಒಗ್ಗಟ್‌ನ ಸಂಸ್ಥಾನ,
ಈಗ ಎಲ್ಲಿ ಹೋತ್ ಭಾವ !
ಆಗ ಇದ್ದ ಒಗ್ಗಟ್‌ತನ
ಗ್ಯಾನ ಮಾಡಿರೆ ಆಕು ನಮಿಗೆ
॥ ಅವ್‌ಮಾನ ॥

### ವಧುನ ಗೇಲಿ ಮಾಡುವುದು

ಕೊಟ್ಟ್ ಕತ್ತಿ ಬಾಣೆಲಿ
ಕೊಂಬೋಲಗ ಕೇಳದೆ
ಅಳ್‌ಬ್ಯಾಡ ನೀನ್ ಕುಂಜಕ್ಕ
ದಬ್ಬಡ್ಕ್ ಬಾಣೆಲಿ
ದಿಬ್ಬಣ ಬಂದುಟ್ಟು
ಅಳ್‌ಬ್ಯಾಡ ನೀನ್ ಸಂಣಕ್ಕ.

● ಕೊಳಂಬೆ ವಿನು ಬೆಳ್ಳಪ್ಪ
ಅಭ್ಯತ್ ಮಂಗಲ (ಸಿದ್ದಾಪುರ)
ಮಡಿಕೇರಿ.

---

ಪ್ರಿಯ ಓದುಗರೆ,

ನೀವ್ ನಮಿಗೆ ಪತ್ರಗಳ್ನ ಬರೆಯಕಾಕನ ದಯಮಾಡಿ ಅದ್ ಯಾವ ವಿಭಾಗಲಿ ಪ್ರಕಟಿಸೊಕುತೇಳಿ ಸ್ಪಷ್ಟವಾಗಿ ಬರೇನಿ. 'ಶುಭಾಶಯ ಜಾಹೀರಾತ್' ಅಥವಾ 'ವ್ಯವಹಾರ ಜಾಹೀರಾತ್' ಗಳನ್ನ ಕಳ್ಸ್‌ಕಾಕನ ಎಷ್ಟ್ ಪುಟಲಿ ಪ್ರಕಟಿಸೊಕುತೇಳಿ ನಮೂದಿಸಿ, ಸಂಬಂಧಪಟ್ಟ ದುಡ್ಡ್‌ನ ಮನಿ ಆರ್ಡರ್ ಮೂಲಕ ಕಳ್ಸಿ ಸಹಕರಿಸಿ.

-ಸಂ.

---

## ಸೂಕ್ತಿ

ತಜ್ಞನೆನಿಸಿಕೊಂಡಾತನಿಗೆ ಎಲ್ಲದಕ್ಕೂ ಉತ್ತರ ಗೊತ್ತಿದೆ ಎಂದೇನಿಲ್ಲ. ಸಾಕಷ್ಟು ಹಣ ಕೊಟ್ಟರೆ ಆತ ಎಲ್ಲದಕ್ಕೂ ಉತ್ತರ ಹುಡುಕಬಲ್ಲ.

○ ರೆಕ್ಸ್ ಪ್ಲೆಚರ್

* ಯಾವ ಪ್ರಾಣಿಯನ್ನೂ ಹಿಂಸಿಸದಿರುವುದೇ ಜ್ಞಾನದ ತಿರುಳು.

* ಯಾರ ಜೊತೆಯಲ್ಲೂ ವೈರತ್ವ ಇಟ್ಟುಕೊಳ್ಳಬೇಡ.

○ ಮಹಾವೀರ

## ಕಾಲಕಂಡೊ



ದಿ॥ ಶ್ರೀ ಗಣಪತಿ

ಕಾಳೇರಮ್ಮನ ಮನೆ ದಿ॥ ಚಿಣ್ಣಪ್ಪನವರ ಮಂಜ ಗಣಪತಿನವು ಜೂನ್ 15ರಂದ್ ಮಂಡ್ಯ ನಗರಲಿ ಕಾಲಕಂಡ್ ಹೋದೋ. ಇವುಕೆ 59 ವರ್ಷ ಪ್ರಾಯ ಆಗಿತ್ತ್. ಇವ್ ಹೆಣ್ಣ್ ಮತ್ತೆ ಇಬ್ಬೊರು ಪುತ್ರಿಯರ್ನ ಬುಟ್ಟ್ ಹೋಗೊಳೊ. ಇವು ಮಂಡ್ಯದ ಸರ್ಕಾರಿ ಜೂನಿಯರ್ ಕಾಲೇಜ್‌ಲಿ ಉಪನ್ಯಾಸಕರಾಗಿ, ನಿವೃತ್ತಿ ಹೊಂದಿದ್ದೊ. ವಿಶಾಲ ಮನೋಭಾವದ ಸಮಾಜ ಹಿತೈಷಿಯಾದ ಇವು ಮಂಡ್ಯ ನಗರದ ಸಂತೋಷ ಕೂಟ ಸ್ಥಾಪನೆಗೆ ಮುಖ್ಯ ಪಾತ್ರವಹಿಸಿದ್ದೊ.

K.R.N.N. 240

# ಕೊಡಗು ಮತ್ತು ದಕ್ಷಿಣ ಕನ್ನಡ

# ಗೌಡ ಸಮಾಜ (ರಿ.)

ಬೆಂಗಳೂರು, ರಿಜಿಸ್ಟರ್ಡ್ ನಂ. 265/69-70

ಒಂದನೇ 'ಸಿ' ಮುಖ್ಯ ರಸ್ತೆ, ಗಂಗಾನಗರ ಬಡಾವಣೆ, ಬೆಂಗಳೂರು-560032.

ಪ್ರಥಮ ಪಾಕ್ಷಿಕ ಪತ್ರಿಕೆ 'ಕೊಡಗು ಸಂಗಾತಿ' ಗೆ ನಮ್ಮ ಸಮಾಜದ ಸರ್ವ ಸದಸ್ಯರ ಹಾರ್ದಿಕ ಶುಭಾಶಯಗಳು....

## ಸಂಘದ ಉದ್ದೇಶಗಳು

- ಸಂಸ್ಕೃತಿ ಮತ್ತು ಸಾಮೂಹಿಕ ಸಭೆಗಳನ್ನು ಏರ್ಪಡಿಸುವುದು.
- ಆಟೋಟಗಳನ್ನು ಏರ್ಪಡಿಸುವುದು.
- ಪುಣ್ಯ ಸ್ಥಳಗಳಿಗೆ ಮತ್ತು ಪ್ರೇಕ್ಷಣೀಯ ಸ್ಥಳಗಳಿಗೆ ಪ್ರವಾಸ ಏರ್ಪಡಿಸುವುದು.
- ಅರ್ಹ ವಿದ್ಯಾರ್ಥಿ ಹಾಗೂ ಪ್ರಶಸ್ತಿ ವಿಜೇತರನ್ನು ಸನ್ಮಾನಿಸಿ ಪ್ರೋತ್ಸಾಹಿಸುವುದು.
- ನಮ್ಮ ಸಮಾಜದ ಸಂಸ್ಕೃತಿಯನ್ನು ಅಭಿವೃದ್ಧಿಪಡಿಸುವುದು ಮತ್ತು ಅದರ ಬಗ್ಗೆ ಪುಸ್ತಕ ಪ್ರಕಟಿಸುವುದು.
- ಮಹಿಳಾ ಮತ್ತು ಯುವಕರ ಅಭಿವೃದ್ಧಿಗಾಗಿ ವಿವಿಧ ಯೋಜನೆಗಳನ್ನು ಅಳವಡಿಸುವುದು.

## ನಾವು ಹಮ್ಮಿಕೊಂಡಿರುವ ಕಾರ್ಯಕ್ರಮಗಳು

- ಸಮಾಜದವರ ಕಲ್ಯಾಣಕ್ಕಾಗಿ ವಧು-ವರಾನ್ವೇಷಣಾ ಕೇಂದ್ರ
- ಉದ್ಯೋಗಾರ್ಥಿಗಳ ಅನುಕೂಲಕ್ಕಾಗಿ ಉದ್ಯೋಗ ಮಾಹಿತಿ ಕೇಂದ್ರ
- ಬಡ ಜನರ ಕಲ್ಯಾಣಕ್ಕಾಗಿ ಹೊಲಿಗೆ ತರಬೇತಿ ಕೇಂದ್ರ

ಸೂಚನೆ : ಹೆಚ್ಚಿನ ಮಾಹಿತಿಗಾಗಿ ಸಂಘದ ಕಾರ್ಯದರ್ಶಿ ಅಥವಾ ಆಫೀಸ್ ಮ್ಯಾನೇಜರ್‌ರವರನ್ನು ಸಂಜೆ 5 ರಿಂದ 7 ಗಂಟೆ ಸಮಯದಲ್ಲಿ ಸಮಾಜದ ಆಫೀಸ್‌ನಲ್ಲಿ ಸಂಪರ್ಕಿಸಲು ಕೋರಲಾಗಿದೆ. ದೂರವಾಣಿ 080/3433014

ವಿ. ಸೂ. : ನಮ್ಮ ಸಮಾಜದ ವಾರ್ಷಿಕ ಮಹಾಸಭೆ ಹಾಗೂ ಕೈಲು ಮುಹೂರ್ತ ಹಬ್ಬವನ್ನು ತಾ|| 28-9-97 ರಂದು ವಸಂತನಗರದಲ್ಲಿರುವ ಜಷ್ಮಾ ಭವನದಲ್ಲಿ ಬೆಳಿಗ್ಗೆ 9 ಗಂಟೆಯಿಂದ ನಡೆಸಲಾಗುವುದು. ಸರ್ವರಿಗೂ ಸ್ವಾಗತ

ಪೂಜಾರಿ ವೊಣ್ಣಪ್ಪ
ಅಧ್ಯಕ್ಷರು

ಕಾರ್ಯಕಾರಿ ಮಂಡಳಿ

ನೂಜಿ ದಿನಕರ ಗೌಡ
ಕಾರ್ಯದರ್ಶಿ

Edited, Published and Owned by PATTADA. P. SHEELAMANI, Published at No 322, Bhogadi Circle, Hinkal Post, Mysore-570017.
Printed at ASHIRWAD PRINTERS, 180/A, 6th Main, Vinayakanagar, Mysore-570012.